Sanction as Text-book under No. D/47—23793 of 9—7—1954

# ಭಾರತೀಯ ಇತಿಹಾಸ ಪ್ರಕಾಶ

## ೧ನೆಯ ಪುಸ್ತಕ



ಲೇಖಕರು:—

ಆರ್. ಕೆ. ಲಕ್ಕುಂಡಿ ಬಿ. ಎ. (ಆನರ್ಸ), ಬಿ. ಟಿ., (ಫರ್ಸ್ಟ್‌ಕ್ಲಾಸ),
ರಿಟಾಯರ್ಡ ಪ್ರಿನ್ಸಿಪಾಲರು ಗಂಡುಮಕ್ಕಳ ಸರಕಾರೀ ಟ್ರೇನಿಂಗ ಕಾಲೇಜ,
ಧಾರವಾಡ

ಎಚ್. ಎಸ್. ದೂದಿಹಳ್ಳಿ ಬಿ. ಎ., ಬಿ. ಟಿ., ಡಿ. ಬಿ, ಇ.
ಅಧ್ಯಾಪಕರು, ಕೆ. ಎ. ಬೋರ್ಡಿನ ಟ್ರೇನಿಂಗ ಕಾಲೇಜ, ಧಾರವಾಡ.



ಪಂಚಮ ಪುನರ್ಮುದ್ರಣ ]     ೧೯೫೪     [ ಬೆಲೆ : ೦-೧೫-೦

ಶ್ರೀ.

# ಮುನ್ನುಡಿ

ಮುಂಬಯಿಪ್ರಾಂತದ ಶಿಕ್ಷಣಖಾತೆಯುವರು ನಿರ್ಧರಿಸಿದ ಅಭ್ಯಾಸ ಕ್ರಮವನ್ನು ಅನುಸರಿಸಿ ಕನ್ನಡ ಪ್ರಾಥಮಿಕ ೫ನೆಯ ವರ್ಗಕ್ಕೂ ಮಾಧ್ಯಮಿಕ ಶಿಕ್ಷಣದ ೧ನೆಯ ವರ್ಗಕ್ಕೂ ಅನುಕೂಲವಾಗುವಂತೆ ಈ ಭಾರತೀಯ ಇತಿಹಾಸ ಪ್ರಕಾಶ-೧ನೆಯ ಪುಸ್ತಕವು '' ಬರೆಯಲ್ಪಟ್ಟಿದೆ. ಇತಿಹಾಸದ ಶಿಕ್ಷಣದಲ್ಲಿ ಚಿಕ್ಕಮಕ್ಕಳ ವಯಸ್ಸಿನ ಧಾರಣಶಕ್ತಿಯನ್ನು ಅನುಲಕ್ಷಿಸಿ ಅದರಿಗೆ ಬೋಧವಾಗುವಂತೆ ಸುಲಭವೂ ಲಲಿತಪದಗಳಿಂದ ಸುರಮ್ಯವೂ ಆದ ಭಾಷೆಯಲ್ಲಿ ನಾಡಿನ ಇತಿವೃತ್ತವನ್ನು ತಿಳಿಸುವ ಧ್ಯೇಯವು ಅವಶ್ಯವಾದುದು. ವಿವಿಧ ರಂಗಗಳಲ್ಲಿ ನಾಡಿನ ಜನರು ತೋರಿಸಿದ ಪರಾಕ್ರಮಗಳನ್ನೂ ಮಾಡಿದ ಕೃತಿಗಳನ್ನೂ ಸೂಕ್ಷ್ಮರೀತಿಯಿಂದ ಸಂಕಲನಮಾಡಿ ಯಥಾವಸ್ಥಿತವಾದ ಸಂಗತಿಗಳನ್ನು ಮಾತ್ರ ಶಾಸ್ತ್ರೀಯ ಪದ್ಧತಿಯಲ್ಲಿ ತಿಳಿದುಕೊಳ್ಳುವದರಿಂದ ನಾಡಿನ ವಿಶಿಷ್ಟ ಸಂಸ್ಕೃತಿಯ ಪರಿಚಯವಾಗುತ್ತದೆ. ಈ ಸಂಸ್ಕೃತಿಜ್ಞಾನದಿಂದ ನಾಡು ಸ್ಖಲನೆಯಿಲ್ಲದಂತೆ ಮುಂದಿನ ಹೆಜ್ಜೆಯನ್ನು ಇಡಲು ಸಮರ್ಥವಾಗುತ್ತದೆ. ಇದರಿಂದ ನಾಡಿಗೂ ತದ್ಘಟಕವಾದ ವ್ಯಕ್ತಿಗೂ ಸುಖ-ಶಾಂತಿಗಳು ಉಂಟಾಗುವವು. ಆದುದರಿಂದ ಉಪಲಬ್ಧವಾದ ಮೂಲವಸ್ತುಗಳನ್ನು ವಿವೇಚನಾತ್ಮಕಬುದ್ಧಿಯಿಂದ ವಿಮರ್ಶಿಸಿ ಯಥಾವತ್ತಾದ ಇತಿಹಾಸವನ್ನು ಬಯಲಿಗೆ ತರುವದೂ ಇತಿಹಾಸಗ್ರಂಥಕರ್ತ್ತರ ಹೊಣೆಗಾರಿಕೆಯ ಕಾರ್ಯವಾಗಿದೆ. ಈ ಕಠಿಣವಾದ ಹೊಣೆಗಾರಿಕೆಯನ್ನು ಅರಿತು ಗ್ರಂಥಕರ್ತ್ತರು ಈ ಚಿಕ್ಕ ಹೊತ್ತಿಗೆಯನ್ನು ಬರೆದಂತೆ ಅಲ್ಲಿ ಸಂಗ್ರಹೀತವಾದ ವಿಷಯಗಳಿಂದ ಗೊತ್ತಾಗುತ್ತದೆ. ಇದೀಗ ಧಾರವಾಡ ಟ್ರೇನಿಂಗ ಕಾಲೇಜದಿಂದ ನಿವೃತ್ತ ಪ್ರಧಾನಾಧ್ಯಾಪಕರಾದ ಶ್ರೀಮಾನ್ ಲಕ್ಕುಂಡಿ ರಂಗರಾಯರು ಶಿಕ್ಷಣದಲ್ಲಿ ನುರಿತ ಶ್ರೀ. ಹುಚ್ಚ-ರಾವ ದೂದಿಹಳ್ಳಿಯವರ ಸಹಕಾರದಿಂದ ಈ ಪುಸ್ತಕವನ್ನು ಬರೆದಿದ್ದಾರೆ.

ಶ್ರೀ. ಲಕ್ಕುಂಡಿ ರಂಗರಾಯರಿಗೆ ಸರಕಾರಿ ಮಾಧ್ಯಮಿಕ ಶಾಲೆಗಳ ಶಿಕ್ಷಕರಾಗಿಯೂ ಬೆಳಗಾವಿಯ ಜಿ. ಎ. ಕಾಲೇಜದ ಇತಿಹಾಸ-ಪ್ರಾಧ್ಯಾಪಕರಾಗಿಯೂ, ಕಡೆಗೆ ಧಾರವಾಡದ ಟ್ರೇನಿಂಗ ಕಾಲೇಜದ ಪ್ರಧಾನಾಧ್ಯಾಪಕರಾಗಿಯೂ, ಇತಿಹಾಸದ ಕಠಿಣವಾದ ವಿಷಯಗಳ ಶಿಕ್ಷಣದಲ್ಲಿ ೩೦ ವರ್ಷಗಳ ಸಂತತವಾದ ಅನುಭವವಿರುತ್ತದೆ. ಇತಿಹಾಸವನ್ನು ಶಾಸ್ತ್ರೀಯ ಮರ್ಯಾದೆಯಲ್ಲಿ ಚಿಕ್ಕಮಕ್ಕಳಿಗೆ ಕಲಿಸುವ ಪ್ರಾಧ್ಯಾಪಕರಲ್ಲಿ ಹೆಸರಾಂತವರಲ್ಲಿ ಶ್ರೀ. ಲಕ್ಕುಂಡಿ ರಂಗರಾಯರೊಬ್ಬರು. ಇಂಥ ಅನುಭವಶಾಲಿಗಳಾದ ಅಧ್ಯಾಪಕರು ವಿದ್ಯಾರ್ಥಿಗಳ ಮನಸ್ಸಿನ ಬಲಾಬಲಗಳನ್ನು ತಿಳಿದುಕೊಂಡು ಅವರಿಗೆ ಗ್ರಹಣವಾಗುವಂತೆ ಕಠಿಣವಾದ ಸಂಗತಿಗಳನ್ನು ಸುಗಮವೂ ಶುದ್ಧವೂ ಆದ ಭಾಷೆಯಲ್ಲಿ ತಿಳಿಸಲು ಸಮರ್ಥರಾಗುತ್ತಾರೆ. ಇಂಥವರು ಬರೆದ ಇತಿಹಾಸದ ಪುಸ್ತಕಗಳಿಂದ ವಿದ್ಯಾರ್ಥಿಗಳಿಗೆ ನಿಜವಾದ ಲಾಭವಾಗುವದು.

ಈ ಪುಸ್ತಕದಲ್ಲಿ ೧೪ ಪ್ರಕರಣಗಳಿದ್ದು, ಅವುಗಳಲ್ಲಿ ಪ್ರಾಚೀನಕಾಲವೆಂದರೆ ಪೃಥ್ವಿಯ ಸೃಷ್ಟಿಕಾಲದಿಂದ ಇತಿಹಾಸಕಾಲದ ಕ್ರಿ. ಶ. ೧೨ನೆಯ ಶತಮಾನದ ವರೆಗಿನ ಅವಧಿಯಲ್ಲಿ ಜರುಗಿದ ಮಾನವನ ಕೃತಿಗಳಲ್ಲಿ ಮುಖ್ಯವಾದವುಗಳನ್ನು ಸಂಗ್ರಹಿಸಲಾಗಿದೆ. ೧ನೆಯ ಪ್ರಕರಣದಲ್ಲಿ ಪೃಥ್ವಿಯ ಸೃಷ್ಟಿ, ಜೀವರಾಶಿಗಳ ಉದಯ, ಹುಟ್ಟಿದ ಪ್ರಾಣಿಗಳಲ್ಲಿ ಶ್ರೇಷ್ಠನಾದ ಮನುಷ್ಯನು ಬದುಕಲಿಕ್ಕೆ ಮಾಡಿದ ಪ್ರಯತ್ನ-ಈ ಕಾಡುಸ್ಥಿತಿಗಳಲ್ಲಿ— ಹಳೆಯ ಶಿಲಾಯುಗ, ಹೊಸ ಶಿಲಾಯುಗವೆಂದು ಕರೆಯಲ್ಪಡುವ ಕಾಲದಲ್ಲಿ—ಮಾನವನ ಸಂಸ್ಕೃತಿಯ ಸ್ವರೂಪ ಇವುಗಳನ್ನು ಬಾಲಕರಿಗೆ ಬೋಧವಾಗುವಂತೆ ನಿರೂಪಿಸಿದೆ. ೨ನೆಯ ಪ್ರಕರಣದಲ್ಲಿ ಜಗತ್ತಿನ ನಾಗರಿಕತೆಯು ಹೇಗೆ ಹುಟ್ಟಿತೆಂಬುದನ್ನು ಹೇಳಿದೆ. ಮಾನವನು ನದೀತೀರದಲ್ಲಿ ವಾಸಮಾಡುತ್ತಿದ್ದು ತನ್ನ ಜೀವನವನ್ನು ಸ್ವಾಭಾವಿಕ ಮತ್ತು ಕೃತ್ರಿಮ ಸಾಧನಗಳಿಂದ ಸಾಗಿಸುತ್ತ ಸಂಸ್ಕೃತಿಯ ಬೀಜಗಳನ್ನು ಊರಹತ್ತಿದನು. ಇಜಿಪ್ತದ ನೈಲ ನದೀತೀರದಲ್ಲಿಯೂ ತುರ್ಕಸ್ತಾನದ ಯುಫ್ರೆಟಿಸ್ ನದೀತೀರದಲ್ಲಿಯೂ ಚೀನದ ಹೊ-ಆಂಗ-ಹೊ ನದೀ ತೀರದಲ್ಲಿಯೂ ಆದರಂತೆ ಹಿಂದುಸ್ತಾನದಲ್ಲಿ

ಸಿಂಧು, ಗಂಗಾ ನದೀತೀರಗಳಲ್ಲಿಯೂ ಮಾನವನು ನೆಲಸಿ ತನ್ನ ಜೀವನವನ್ನು ಸಾಗಿಸುತ್ತ ಬಂದನು. ಅಲ್ಲಿ ತನ್ನ ವಿಶಿಷ್ಟ ಸಂಸ್ಕೃತಿಯ ಬೇರುಗಳನ್ನು ಬಿಟ್ಟ ಕಥೆಯೂ ನಿರೂಪಿತವಾಗಿದೆ. ೩ನೆಯ ಪ್ರಕರಣವು ಹಿಂದುಸ್ತಾನದಲ್ಲಿ ಆರ್ಯರು ಬಂದು ನೆಲಸಿದುದನ್ನೂ ಅಲ್ಲಿಯ ಮೂಲನಿವಾಸಿಗಳೊಂದಿಗೆ ಬೆರೆತು ಮಿಶ್ರಸಂಸ್ಕೃತಿಯನ್ನು ಉಂಟುಮಾಡಿದುದನ್ನೂ ತಿಳಿಸುತ್ತದೆ. ೪ನೆಯ ಪ್ರಕರಣವು ರಾಮಾಯಣ ಮಹಾಭಾರತಗಳಲ್ಲಿ ಕಂಡುಬರುವ ಯಜ್ಞಯಾಗಾದಿಗಳ ಯುಗ ಮಹಿಮೆಯನ್ನೂ ೫ನೆಯ ಪ್ರಕರಣವು ಅದಕ್ಕೆ ಪ್ರತೀಕಾರವಾಗಿ ಹೊರಟ ಬುದ್ಧ ಮಹಾವೀರರ ಬೌದ್ಧ ಜೈನ ಧರ್ಮಗಳ ಸ್ವರೂಪವನ್ನೂ ಚಿತ್ರಿಸುತ್ತವೆ. ೬ನೆಯ ಮತ್ತು ೭ನೆಯ ಪ್ರಕರಣಗಳಲ್ಲಿ ಗ್ರೀಸದೇಶದ ಅಲೆಕ್ಝಾಂಡರನ ದಂಡಯಾತ್ರೆಯಿಂದ ಹಿಂದುಸ್ತಾನದ ಮೇಲೆ ಆದ ಪರಿಣಾಮಗಳ ದಿಗ್ದರ್ಶನವನ್ನೂ ನಂದರ ತರುವಾಯ ಆಳಿದ ಮೌರ್ಯ ರಾಜರ ಪರಿಚಯವನ್ನೂ ಮಾಡಿಕೊಡಲಾಗಿದೆ. ೮ನೆಯ ಪ್ರಕರಣದಲ್ಲಿ ಅಶೋಕನ ಆಳಿಕೆ, ೯ನೆಯ ಪ್ರಕರಣದಲ್ಲಿ ಕನಿಷ್ಕನ ರಾಜ್ಯಭಾರ, ೧೦ನೆಯ ಪ್ರಕರಣದಲ್ಲಿ ಗುಪ್ತರ ಆಳಿಕೆ–ಆ ಕಾಲದಲ್ಲಿ ಹಿಂದುಸ್ತಾನದಲ್ಲಿ ಉಂಟಾದ ಸುಖ ಸಾಮ್ರಾಜ್ಯ, ಇವು ನಿರೂಪಿಸಲ್ಪಟ್ಟಿವೆ. ೧೧ನೆಯ ಪ್ರಕರಣವು ಅತ್ಯಂತ ಮಹತ್ವದ್ದಿದ್ದು, ಬೌದ್ಧ–ಭಾರತೀಯ ಸಂಸ್ಕೃತಿಗಳು ಚೀನ, ಮಧ್ಯಏಶಿಯಾ, ಆಗ್ನೇಯ ಏಶಿಯಾ (ಕಂಬುಜ) ಗಳಲ್ಲಿ ಹೇಗೆ ಪ್ರಸಾರಹೊಂದಿದವೆಂಬುದು ಹೇಳಲ್ಪಟ್ಟಿದೆ. ಚೀನದ ಪ್ರವಾಸಿಯಾದ ಹುಯೆನ–ತ್ಸಂಗನು (೭ನೆಯ ಶತಮಾನ) ಹಿಂದುಸ್ತಾನವನ್ನು ಸಂದರ್ಶಿಸಿ ಬರೆದಿಟ್ಟ ವರದಿಯ ಸಾರಾಂಶವೂ ತಕ್ಷಶಿಲಾ, ನಾಲಂದ, ವಿಕ್ರಮಶಿಲಾ ವಿಶ್ವವಿದ್ಯಾಲಯಗಳ ರೂಪನಿರ್ದೇಶವೂ ೧೨ನೆಯ ಪ್ರಕರಣದಲ್ಲಿ ಬರುತ್ತವೆ. ೧೩ನೆಯ ಪ್ರಕರಣವು ಕನೋಜದ ಅರಸನಾದ (೭ನೆಯ ಶತಮಾನ) ಶ್ರೀ ಹರ್ಷವರ್ಧನ, ಕರ್ನಾಟಕದ ಸಮ್ರಾಟನಾದ ೨ನೆಯ ಪುಲಿಕೇಶಿ, ಚೋಳಮನೆತನದ ರಾಜನಾದ ರಾಜೇಂದ್ರಚೋಳ (೧೧ನೆಯ ಶತಮಾನ) ಇವರ ಉದ್ಬೋಧಕ ಚರಿತ್ರೆಗಳನ್ನೂ ೧೪ನೆಯ ಪ್ರಕರಣವು ಶ್ರೀ ಶಂಕರಾಚಾರ್ಯರ ಜೀವನಚಿತ್ರ ಮತ್ತು ಅವರ ಯುಗದ ಮಹಿಮೆಗಳನ್ನೂ ಸಂಕ್ಷೇಪವಾಗಿ ವಿವರಿಸುತ್ತವೆ.

ಈ ರೀತಿ ಚಿಕ್ಕ ಬಾಲಕರಿಗೆ ಉಪಯೋಗವಾಗುವಂತೆ ಶ್ರೀ. ಲಕ್ಕುಂಡಿ ಯವರು ಹಿಂದುಸ್ತಾನದ ಸಾಂಸ್ಕೃತಿಕ ಇತಿಹಾಸವನ್ನು ಮಾರ್ಮಿಕವಾಗಿ ಬರೆದಿದ್ದಾರೆ. ಒಂದೊಂದು ಪ್ರಕರಣಕ್ಕೆ ಬೋಧಕ ಚಿತ್ರಗಳನ್ನು ಪಾಠದ ಆರಂಭದಲ್ಲಿ ಜೋಡಿಸಿರುವದರಿಂದ ಎಳೆಯ ಮಕ್ಕಳಿಗೆ ಅವುಗಳನ್ನು ನೋಡಿ ದೊಡನೆ ಆ ಪ್ರಕರಣವಲ್ಲಿ ಹೇಳಿದ ವಿಷಯಗಳ ಸಾಮಾನ್ಯಜ್ಞಾನವು ಕೂಡಲೆ ಆಗುತ್ತದೆ. ಇದರಿಂದ ಅವರ ನಿರೀಕ್ಷಣಶಕ್ತಿಯು ಪಟುವಾಗುವದು. ಇನ್ನೊಂದು ಮಹತ್ವದ ಅಂಶವೆಂದರೆ, ಪ್ರತಿಯೊಂದು ಪ್ರಕರಣದ ಮುಖ್ಯ ಮುಖ್ಯವಾದ ಭಾಗಗಳಲ್ಲಿ ಶಿಕ್ಷಕರ ಸೌಕರ್ಯಕ್ಕಾಗಿ ಅಡಿ-ಟಿಪ್ಪಣಿಗಳನ್ನು ಕೊಟ್ಟದ್ದು. ಇದರಿಂದ ಪ್ರಾಥಮಿಕ ಶಿಕ್ಷಕರಿಗೆ ಇತಿಹಾಸದ ಹೆಚ್ಚಿನ ಪರಿ ಚಯವಾಗಿ ಮುಂದೆ ಬೇರೆ ಗ್ರಂಥಗಳನ್ನು ಓದಿ ದೀರ್ಘ ಅಭ್ಯಾಸಕ್ಕಾಗಿ ಕೌತೂ ಹಲವು ಹುಟ್ಟುವದು.

ಪ್ರತಿಯೊಂದು ಪ್ರಕರಣದಲ್ಲಿ ಗ್ರಂಥಕರ್ತರು ವಿಷಯಗಳ ಜೋಡಣೆ ಯಲ್ಲಿಯೂ ಕಾಲಮಾನಕ್ಕೆ ತಕ್ಕಂತೆ ಸಂಗತಿಗಳನ್ನು ನಿರೂಪಿಸುವದ ರಲ್ಲಿಯೂ ತಮ್ಮ ಸುದೀರ್ಘ ಅನುಭವದ ಔಚಿತ್ಯವನ್ನು ತೋರಿಸಿದ್ದಾರೆ. ಇವೆಲ್ಲ ಹೊಸ ಸುಧಾರಣೆಗಳಿಂದಲೂ ವಿಷಯದ ಶಾಸ್ತ್ರೀಯ ಪ್ರತಿಪಾದನೆ ಯಿಂದಲೂ ಈ ಚಿಕ್ಕ ಹೊತ್ತಿಗೆಯು ಬಾಲಕರಿಗೆ ಬಹಳ ಉಪಕಾರವನ್ನುಂಟು ಮಾಡಬಹುದೆಂದು ನಾನು ನಂಬಿದ್ದೇನೆ.

ಭಾಷೆಯು ಸುಲಭವೂ ಸುಗಮವೂ ವ್ಯಾಕರಣನಿಯಮಗಳಿಗೆ ಅನು ಕೂಲವೂ ಇದ್ದು ಓಜಸ್ವಿಯಾಗಿದೆ. ಶ್ರೀ ಲಕ್ಕುಂಡಿ ರಂಗರಾಯರೂ ಶ್ರೀ ದೊದಿಹಳ್ಳಿ ಹುಚ್ಚರಾಯರೂ ಈ ಮಾದರಿಯ ಪುಸ್ತಕಗಳನ್ನು ಮುಂದಿನ ವರ್ಗಗಳ ವಿದ್ಯಾರ್ಥಿಗಳಿಗೋಸ್ಕರ ಬರೆದರೆ ಉಪಕಾರವಾದೀತೆಂದು ನಂಬಿದ್ದೇನೆ.

ಧಾರವಾಡ,
೧೯-೧-೫೦

ರಾ. ಸ್ವಾ. ಪಂಚಮುಖಿ, ಎಂ. ಎ.,
ವಿದ್ಯಾರತ್ನ, ಡೈರೆಕ್ಟರ,
ಕನ್ನಡ ರಿಸರ್ಚ ಇನಸ್ಟಿಟ್ಯೂಟ, ಧಾರವಾಡ.

# ಅರಿಕೆ

ಇತಿಹಾಸವು ಜಗತ್ತಿನಲ್ಲಿ ಸಚೇತನ ಪ್ರಪಂಚದಲ್ಲಿ ಪ್ರಾಮುಖ್ಯ ವಾದ ಮಾನವಕೋಟಿಗೆ ಸಂಬಂಧಿಸಿದ ವಿಷಯ. ಮಾನವನು ಅತ್ಯಂತ ಪ್ರಾಚೀನಕಾಲದಿಂದ ಮೊದಲುಗೊಂಡು ಇಲ್ಲಿಯವರೆಗೆ ಅವಿರತವಾಗಿ ಶ್ರಮಬಟ್ಟು ಸಿದ್ಧಿಸಿದ ಪ್ರಗತಿಯನ್ನು ಯಥಾವತ್ತಾಗಿ ನಿರೂಪಿಸುವದೇ ಇತಿ ಹಾಸದ ಮುಖ್ಯ ಕಾರ್ಯವು. ನಾವು ಯಾವದೇ ರಾಷ್ಟ್ರದ ಪ್ರಚಲಿತ ಪರಿ ಸ್ಥಿತಿಯನ್ನು—ಅದರಲ್ಲಿಯು ಈಗಿನ ಜನಜೀವನ, ಶಾಸನ ಪದ್ಧತಿ, ವ್ಯಾಪಾ ರೋದ್ಯೋಗ, ಕಲಾಕೌಶಲ್ಯ ಇವೇ ಮುಂತಾದ ಸಂಸ್ಕೃತಿಯ ವಿವರ ಗಳನ್ನು—ಮನದಟ್ಟಾಗುವಂತೆ ತಿಳಿದುಕೊಳ್ಳುವದಕ್ಕಾಗಿ ಆ ರಾಷ್ಟ್ರದ ಹಿಂದಿನ ಇತಿಹಾಸವನ್ನು ಕಲಿಯಲಿಕ್ಕೇಬೇಕು. ಅಂದರೆಯೇ ಅವೆಲ್ಲವೂ ಹೇಗೆ ಬೆಳವಣಿಗೆ ಹೊಂದಿಬಂದಿರುವವೆಂಬ ಜ್ಞಾನವಾಗುವದು.

ಮೇಲ್ಕಾಣಿಸಿದ ಈ ದೃಷ್ಟಿಯಿಂದ ಮುಂಬಯಿ ಸರಕಾರವು ಇತ್ತೀ ಚಿಗೆ ಇತಿಹಾಸ ವಿಷಯದಲ್ಲಿ ಹೊಸ ಅಭ್ಯಾಸ ಪತ್ರಿಕೆಯನ್ನು ತಯಾರಿಸಿದೆ. ಈ ರೀತಿಯಾಗಿ ಪ್ರಾಚೀನ ಭಾರತದ ಘನತೆಯ ಬಗೆಗೆ ಹೆಚ್ಚಿನ ವಿವರ ಗಳನ್ನು ಕಲಿಯಲು ಹೆಚ್ಚು ಅವಕಾಶ ದೊರೆತಿದೆ. ಇದರ ಸ್ಫೂರ್ತಿಯಿಂದ ಭಾರತದ ಪ್ರಾಚೀನ ಇತಿಹಾಸದ ಜ್ಞಾನವು ತುಸುಮಟ್ಟಿಗಾದರೂ ಬಾಲಕ ಬಾಲಿಕೆಯರಿಗೆ ಲಭಿಸಬೇಕೆಂಬ ಉದ್ದೇಶದಿಂದ ಈ ಪುಸ್ತಕವು ರಚಿತವಾಗಿ ರುವದು. ಇದು ಪ್ರಾಥಮಿಕ, ಮಾಧ್ಯಮಿಕ ಶಾಲೆಗಳ ಐದನೆಯ ಇಯತ್ತೆಯ ಬಾಲಕಬಾಲಿಕೆಯರಿಗೆ ತುಂಬಾ ಉಪಯುಕ್ತವಾದ 'ಪಠ್ಯಪುಸ್ತಕ' ವಾಗ ಬಹುದೆಂದು ಆಶಿಸಲಾಗಿದೆ. ಪ್ರಾರಂಭದಿಂದಲೆ ಬಾಲಕರಲ್ಲಿ ಇತಿಹಾಸದ ಬಗೆಗೆ ಅಭಿರುಚಿ ಹುಟ್ಟಲೆಂದು ಈ ಹೊತ್ತಿಗೆಯಲ್ಲಿ ಭಾಷೆಯ ಬಗ್ಗೆ ವಿಶೇಷ ಲಕ್ಷ್ಯಕೊಡಲಾಗಿದೆ. ಕಥಾನಕರೂಪದಲ್ಲಿಯೆ ಆದಷ್ಟು ಮಟ್ಟಿಗೆ ಎಲ್ಲ ಸಂಗತಿ ಗಳನ್ನು ವಿವರಿಸಲಾಗಿದೆ. ವಿಷಯಗ್ರಹಣಕ್ಕೆ ಸ್ಫೂರ್ತಿಯನ್ನುಂಟುಮಾಡು ವಂಥ ಮತ್ತು ನಿಜವಾಗಿಯೂ ಸಹಾಯಕವಾಗುವ ಸಲಕರಣೆಗಳನ್ನಷ್ಟೆ— ಚಿತ್ರ, ನಕಾಶ ಮುಂತಾದವುಗಳು—ಈ ಹೊತ್ತಿಗೆಯಲ್ಲಿ ಕೊಡಲಾಗಿದೆ.

ಹೆಚ್ಚಿನ ವಿವರಗಳಿಗಾಗಿ ಅಲ್ಲಲ್ಲಿ ಅಡಿ-ಟಿಪ್ಪಣಿಗಳಿರುವವು. ಕೊನೆಯದಾಗಿ, ಇದರಲ್ಲಿ ಕೊಟ್ಟಿರುವ ಅಭ್ಯಾಸನಗಳಲ್ಲಿ ಒಂದು ಕ್ರಮಬದ್ಧತೆ ಹಾಗು ವೈವಿಧ್ಯತೆಯಿದೆ ಎಂದು ಕಾಣಬಹುದು.

ಶಿಕ್ಷಕರಿಗೆ ಇದರಲ್ಲಿಯ ಯೋಜನೆಯನ್ನು ಕುರಿತು ಒಂದೆರಡು ಮಾತುಗಳನ್ನು ತಿಳಿಸಿದರೆ ಅಪ್ರಸ್ತುತವಾಗಲಿಕ್ಕಿಲ್ಲ. ಈ ಹೊತ್ತಿಗೆಯಲ್ಲಿಯ ಅಡಿ-ಟಿಪ್ಪಣೆಗಳು ವಿಶೇಷವಾಗಿ ಶಿಕ್ಷಕರಿಗೆ ನೆರವಾಗಬೇಕೆಂಬುವ ಹಂಬಲದಿಂದ ಕೊಡಲ್ಪಟ್ಟಿವೆ. ಇವು ಬಾಲಕಬಾಲಕಿಯರಿಗೆ ತಿಳಿದುಬರಬೇಕೆಂದು ಆಗ್ರಹ ವಿಲ್ಲ. ಎರಡನೆಯದಾಗಿ, ಈ ಪುಸ್ತಕದಲ್ಲಿ ಪ್ರತಿಯೊಂದು ಪ್ರಕರಣಕ್ಕೆ ಸಂಬಂಧಿಸಿದ ಚಿತ್ರ, ನಕಾಶ ಮುಂತಾದವುಗಳನ್ನು ಆಯಾ ಪ್ರಕರಣದ ಮೊದಲಿಗೆ ಕೊಟ್ಟಿರುವ ಹೊಸ ಯೋಜನೆಯು ಕಂಡುಬರುವದು. ಇದರ ಮುಖ್ಯ ಉದ್ದೇಶವೆಂದರೆ-ಮೊದಲೇ ಎಲ್ಲ ಚಿತ್ರಗಳು ಕಣ್ಣಿಗೆ ಬೀಳುವದರಿಂದ ಆ ಆ ಚಿತ್ರಗಳಿಗೆ ಸಂಬಂಧಿಸಿದ ಸಂಗತಿಗಳನ್ನು ಆಯಾ ಪ್ರಕರಣದಲ್ಲಿ ತಿಳಿದುಕೊಳ್ಳಲು ಸಹಜವಾಗಿಯೆ ವಿದ್ಯಾರ್ಥಿಗಳಲ್ಲಿ ಕುತೂಹಲ ಉಂಟಾಗುವದು. ಮತ್ತು ಅಭಿರುಚಿಯು ಹೆಚ್ಚಾಗುವದು. ಇವಲ್ಲದೆ ಪ್ರತಿಯೊಂದು ಪ್ರಕರಣದಲ್ಲಿಯ ಸಂಗತಿಯನ್ನು ವಿವರಿಸುವಾಗ ಸಂದರ್ಭಾನುಸಾರವಾಗಿ ಮತ್ತೊಮ್ಮೆ ವಿದ್ಯಾರ್ಥಿಗಳ ಲಕ್ಷ್ಯವನ್ನು ಆಯಾ ಚಿತ್ರ ಇಲ್ಲವೆ ನಕಾಶದ ಕಡೆಗೆ ಎಳೆಯಲಾಗಿದೆ. ಆಗ ಮಾತ್ರ ಶಿಕ್ಷಕರು ಆಯಾ ಚಿತ್ರ ಇಲ್ಲವೆ ನಕಾಶದ ಸಹಾಯದಿಂದ ಅವರಿಗೆ ವಿವರಗಳ ಜ್ಞಾನವಾಗುವಂತೆ ಮಾಡಬೇಕು. ಕೊನೆಯದಾಗಿ, ಈ ಹೊತ್ತಿಗೆಯಲ್ಲಿಯ ಅಭ್ಯಸನಗಳು ಮಾದರಿಗಾಗಿ ಮಾತ್ರ ಕೊಡಲ್ಪಟ್ಟಿವೆ. ಆದ್ದರಿಂದ ಶಿಕ್ಷಕರು ಅಷ್ಟರಿಂದಲೆ ತೃಪ್ತರಾಗದೆ ಅದೇ ನಮೂನೆಯ ಇತರ ಅಭ್ಯಸನಗಳನ್ನು ಕೊಟ್ಟು ಬಾಲಕರಲ್ಲಿ ಇತಿಹಾಸದ ಅಭಿರುಚಿಯು ಬೆಳೆಯುವಂತೆ ಪ್ರಯತ್ನಿಸಬೇಕೆಂದು ಸೂಚಿಸಲಾಗಿದೆ.

ಕನ್ನಡ ಸಂಶೋಧನ ಸಂಸ್ಥೆ (ಧಾರವಾಡ) ಯ ಡೈರೆಕ್ಟರರೂ ವಿದ್ಯಾರತ್ನರೂ ಆಗಿರುವ ಶ್ರೀಮಾನ್ ಆರ್. ಎಸ್. ಪಂಚಮುಖಿಯವರು ನಮ್ಮ ಈ ಹೊತ್ತಿಗೆಯನ್ನು ಆಮೂಲಾಗ್ರವಾಗಿ ಓದಿ ವಿಮರ್ಶಾತ್ಮಕ ಅಮೂಲ್ಯ ಮುನ್ನುಡಿಯನ್ನು ಬರೆದುಕೊಟ್ಟ ಅನುಗ್ರಹಕ್ಕಾಗಿಯೂ ಬೆಳಗಾವಿಯ ಲಿಂಗ

ರಾಜ ಕಾಲೇಜಿನಲ್ಲಿ ಅನೇಕ ವರುಷ ಇತಿಹಾಸದ ಪ್ರಾಧ್ಯಾಪಕರಾಗಿದ್ದ ಮತ್ತು ಗುಣಗ್ರಾಹಿಗಳಾದ ಶ್ರೀಮಾನ್ ಶಿ. ಶಿ. ಬಸವನಾಳರು ತಮ್ಮ ಅಮೂಲ್ಯ ಅಭಿಪ್ರಾಯದಿಂದ ಈ ಹೊತ್ತಿಗೆಗೆ ಕಳೆಕೊಟ್ಟುದಕ್ಕಾಗಿಯೂ ಧಾರವಾಡದಲ್ಲಿರುವ ಪದವೀಧರರ ಜೀವನ ಶಿಕ್ಷಣ ಕೇಂದ್ರದ ಪ್ರಿನ್ಸಿಪಾಲ ರಾಗಿರುವ ಶ್ರೀ. ಕೆ. ಬಿ. ತೇರಗಾಂಪಕರರು ತಮ್ಮ ಸದಭಿಪ್ರಾಯದಿಂದ ಈ ಪುಸ್ತಕದ ಅಂದವನ್ನು ಇಮ್ಮಡಿಗೊಳಿಸಿದುದಕ್ಕಾಗಿಯೂ ನಾವು ಈ ಮೂವರೂ ಮಹನೀಯರಿಗೆ ಕೃತಜ್ಞರು.

ನಮ್ಮ ಈ ಹೊತ್ತಿಗೆಯ ರಚನೆಯ ಕಾರ್ಯದಲ್ಲಿ ನಮಗೆ ನಾನಾ ಬಗೆ ಯಾಗಿ ನೆರವಾದ ಹಾಗು ಸಲಹೆಸೂಚನೆಗಳನ್ನಿತ್ತ ಎಲ್ಲ ಹಿರಿ-ಕಿರಿಯ ಸ್ನೇಹಿತರಿಗೂ, ಇದನ್ನು ಸಕಾಲದಲ್ಲಿ ಲಲಿತವಾಗಿ ಮುದ್ರಿಸಿಕೊಟ್ಟ ಲಲಿತ ಮುದ್ರಣಾಲಯದವರಿಗೂ ನಮ್ಮ ಅಭಿನಂದನೆಗಳು.

ಹೊಸ ಮನ್ವಂತರಕ್ಕೆ ಒಪ್ಪುವ ರೀತಿಯಲ್ಲಿ ಭಾರತದ ಇತಿಹಾಸವನ್ನು ಬರೆದ ಇತಿಹಾಸಜ್ಞರ ಕೃತಿಗಳು ನಮ್ಮೀ ಹೊತ್ತಿಗೆಯ ರಚನೆಯಲ್ಲಿ ತುಂಬಾ ನೆರವಾಗಿರುವುದರಿಂದ ಅವರೆಲ್ಲರ ಉಪಕಾರವನ್ನು ನಾವಿಲ್ಲಿ ನೆನೆಯದೆ ಇರಲಾರೆವು.

ಸಾಧನಕೆರೆ,<br>
ಧಾರವಾಡ.<br>
ಭಾರತ ಹುಣ್ಣಿಮೆ,<br>
ತಾ|| ೨-೨-೧೯೫೦

**ಆರ್. ಕೆ. ಲಕ್ಕುಂಡಿ**<br>
**ಎಚ್. ಎಸ್. ದೂದಿಹಳ್ಳಿ**

# ಪರಿವಿಡಿ

ಪ್ರಕರಣ ಪುಟ

# ಅಭಿಪ್ರಾಯಗಳು.

ಶ್ರೀಮಾನ್ ಆರ್. ಕೆ. ಲಕ್ಕುಂಡಿ ಮತ್ತು ಶ್ರೀಮಾನ್ ಎಚ್. ಎಸ್. ದೂದಿಹಳ್ಳಿ ಇವರು ರಚಿಸಿದ ಭಾರತೀಯ ಇತಿಹಾಸ ಪ್ರಕಾಶ (೧ ನೆಯ ಪುಸ್ತಕ) ವನ್ನು ಅಲ್ಲಲ್ಲಿ ಓದಿ ನೋಡಿದ್ದೇನೆ. ಹೊಸ ಅಭ್ಯಾಸಕ್ರಮಕ್ಕನು ಗುಣವಾಗಿ ಬರೆಯಲ್ಪಟ್ಟ ಈ ಪುಸ್ತಕದಲ್ಲಿ ಆಯಾ ವಿಷಯಗಳು ಐದನೆಯ ಇಯತ್ತೆಯ ವಿದ್ಯಾರ್ಥಿಗಳ ಬುದ್ಧಿಶಕ್ತಿಗೆ ಅನುಗುಣವಾಗಿಯೆ ಇವೆಯೆಂದು ನಾನು ಹೇಳಬಲ್ಲೆ. ಭಾಷೆಯು ಸರಳವಾಗಿಯೂ ಸರಸವಾಗಿಯೂ ಇದೆ. ಈ ಗ್ರಂಥದಲ್ಲಿ ಸೇರಿಸಿದ ಚಿತ್ರಗಳು ಚಿತ್ತಾಕರ್ಷಕವಾಗಿವೆ. ಬಾಲಕರ ಕುತೂಹಲ ವನ್ನು ಕೆರಳಿಸುವಂತಹವಿವೆ. ಪಾಠಗಳ ಕೊನೆಯಲ್ಲಿ ಜೋಡಿಸಲಾದ ಅಭ್ಯ ಸನಗಳು ಅದ್ಯತನ ಶಿಕ್ಷಣ ಪದ್ಧತಿಗನುರೂಪವಾಗಿರುವದೊಂದು ವಿಶೇಷ.

ಈ ಚಿಕ್ಕ ಪುಸ್ತಕವನ್ನು ರಚಿಸಿದ ಶ್ರೀ. ಲಕ್ಕುಂಡಿ ಮತ್ತು ದೂದಿಹಳ್ಳಿ ಯವರು ಶಿಕ್ಷಣ ಕ್ಷೇತ್ರದಲ್ಲಿ, ಅದರಲ್ಲಿಯೂ ಪ್ರಾಥಮಿಕ ಶಾಲೆಗಳಲ್ಲಿಯ ಶಿಕ್ಷಕ ರನ್ನು ತರಬೇತುಗೊಳಿಸುವ ಕಾರ್ಯದಲ್ಲಿ, ಪೂರ್ಣ ಅನುಭವವುಳ್ಳವರಾಗಿದ್ದಾರೆ. ಇಂತಹರು ಆಸ್ಥೆಯಿಂದ ಸಿದ್ಧಪಡಿಸಿದ ಈ ಪುಸ್ತಕವು ಶಿಕ್ಷಕರ ಹಾಗೂ ಬಾಲ ಕರ ಮೆಚ್ಚುಗೆಯನ್ನು ಪಡೆಯುವದೆಂದು ನಂಬಿದ್ದೇನೆ.

ಜಯಕರ್ನಾಟಕ ಕಾರ್ಯಾಲಯ,

ಉ. ಬ. ಗುಡ್ಡ,

ಧಾರವಾಡ.

ಶಿ. ಶಿ. ಬಸವನಾಳ.

ತಾಯ್ನಾಡಿನಲ್ಲಿ ಮಮತೆ ಹಾಗು ಅದರ ಹಿಂದಿನ ಚರಿತ್ರೆಯಲ್ಲಿ ಗೌರವಪ್ರೀತಿಗಳು ಬಾಲಕರಲ್ಲಿ ಸಹಜವಾಗಿ ನೆಲೆಗೊಳ್ಳಬೇಕು; ಮಕ್ಕಳು ತಮ್ಮ ರಾಷ್ಟ್ರೀಯ ಪರಂಪರೆ, ಸಂಸ್ಕೃತಿಗಳನ್ನು ಚೆನ್ನಾಗಿ ಅರಿತುಕೊಳ್ಳ ಬೇಕು ಹಾಗು ಅವುಗಳ ಗುಣಗ್ರಹಣವನ್ನು ಮಾಡಿಕೊಳ್ಳಬೇಕು; ಸಾಮಾನ್ಯ ವಾಗಿ ಮಾನವ ಜಾತಿಯ, ಮುಖ್ಯವಾಗಿ ಭಾರತೀಯರ ಪ್ರಗತಿಯ ವಿಚಾರ ದಲ್ಲಿ, ವಿಶಾಲವಾದ ಹಾಗು ಮನುಷ್ಯಸಹಜವಾದ ಆಸಕ್ತಿಯು ಮಕ್ಕಳಲ್ಲಿ ಬೆಳೆದುಬರಬೇಕು; ಕೊನೆಯದಾಗಿ, ಮಾನವನ ಇಂದಿನ ಜೀವನ-ಸಂಗ್ರಾಮ ವನ್ನು ಯಶಸ್ವಿಯಾಗಿ ಎದುರಿಸಿ ಸತ್ಯ, ಅಹಿಂಸೆ, ನ್ಯಾಯಗಳ ತಳಹದಿಯ ಮೇಲೆ ರಚಿತವಾಗುತ್ತಿರುವ ಹೊಸ ಸಮಾಜದ ಸನ್ಮಾನ್ಯ ನಾಗರಿಕನಾಗಬಯ ಸುವ ಪ್ರತಿಯೊಬ್ಬ ವ್ಯಕ್ತಿಗೆ ಅವನ ಈ ಪ್ರಯತ್ನದಲ್ಲಿ ತನ್ನ ದೇಶದ ಇತಿಹಾಸವು ಮಾರ್ಗದರ್ಶನವಾಗಬೇಕು ಎಂಬ ಆಧುನಿಕ ವಿಚಾರಗಳ ಮೂಲಕವೇ ಇತಿಹಾಸ ಶಿಕ್ಷಣಕ್ಕೆ ಈಗ ಶಿಕ್ಷಣಕ್ರಮದಲ್ಲಿ ಹೊಸ ಕಳೆ ಬಂದಿದೆ.

ಶ್ರೀ. ಲಕ್ಕುಂಡಿ ರಂಗರಾಯರು ಹಾಗು ಅವರ ಸಹಾಯಕರಾದ ಶ್ರೀ. ದೂದಿಹಳ್ಳಿ ಹುಚ್ಚರಾಯರು ಬರೆದು ಪ್ರಸಿದ್ಧಿಸಿದ 'ಭಾರತೀಯ ಇತಿಹಾಸ ಪ್ರಕಾಶ'ದ ಮೊದಲನೆಯ ಪುಸ್ತಕವು ಈ ವಿಚಾರಗಳ ಹಿನ್ನೆಲೆಯಲ್ಲಿ ಪ್ರಕಾ ಶಿತವಾಗಿದೆಯೆಂದು ಹೇಳಲು ಯಾವ ಅಭ್ಯಂತರವು ಕಾಣುವದಿಲ್ಲ.

ಇತರ ಕೆಲವು ಹೊತ್ತಿಗೆಗಳಂತೆ ಕೇವಲ ವಿಷಯನಿರೂಪಣೆಯನ್ನು ಮಾಡಲು ಹೊರಡದೆ, ಬಾಲಕರ ಹೃದಯ ಮನಸ್ಸುಗಳ ಬೆಳವಣಿಗೆಯ ಕ್ರಮಗಳನ್ನು ಅವಲೋಕಿಸಿಕೊಂಡು ಮಕ್ಕಳಿಗೆ ಅದರಲ್ಲಿ ನಿಜವಾದ ಆಸ್ಥೆ ಉಂಟುಮಾಡುವ ಪ್ರಯತ್ನವನ್ನು ಈ ಪುಸ್ತಕದಲ್ಲಿ ಕಾಣಬಹುದು; ಅಲ್ಲದೆ ಮಕ್ಕಳ ಮನಸ್ಸನ್ನು ಆಕರ್ಷಿಸಲು ಅಲ್ಲಲ್ಲಿ ಸಾಕಷ್ಟು ಚಿತ್ರ ನಕಾಶಗಳನ್ನು ಒಂದು ವಿಶಿಷ್ಟ ಕ್ರಮದಲ್ಲಿ ಹಾಕಿ ಬಾಲಕರಿಗೆ ಬೇಗ ಗ್ರಹಣವಾಗುವಂತೆ ಸುಲಭವಾದ ಶೈಲಿಯಲ್ಲಿ ಮತ್ತು ಮಕ್ಕಳ ಅಳವಿನೊಳಗಿನ ಶಬ್ದಗಳನ್ನು ಉಪಯೋಗಿಸಿ ಗ್ರಂಥಕರ್ತರು ತಮ್ಮ ಪುಸ್ತಕವನ್ನು ಮಕ್ಕಳಿಗೆ ರುಚಿಸು ವಂತೆ ಮಾಡಿದ್ದಾರೆ.

ಕೆಲಕೆಲವು ಸನ್ನಿವೇಶಗಳಂತೂ ಪುಸ್ತಕವನ್ನು ಅವಲೋಕಿಸಿದೊಡನೆ ಕಣ್ಣೆದುರಿಗೆ ನಿಲ್ಲುವಂತೆ ಭಾಸವಾಗುತ್ತದೆ. ಅದೇ ಸಂದರ್ಭದಲ್ಲಿ ಸಣ್ಣ ಮಕ್ಕಳಿಗೆ

ಕಲಿಸಲು ಶಿಕ್ಷಕರಿಗೆ ಮಾರ್ಗದರ್ಶನವಾಗುವಂತೆ ಆಧುನಿಕ ಶಿಕ್ಷಣ ಪದ್ಧತಿಗಳನ್ನನುಸರಿಸಿದ ಅಭ್ಯಸನಗಳನ್ನು ಪ್ರತಿಯೊಂದು ಪಾಠದ ಕೊನೆಗೆ ಕೊಟ್ಟಿದ್ದಾರೆ; ಮತ್ತು ಶಿಕ್ಷಕರ ಹೆಚ್ಚಿನ ವಿಷಯ ಜ್ಞಾನಕ್ಕಾಗಿ ಅಲ್ಲಲ್ಲಿ ಅಡಿ-ಟಿಪ್ಪಣೆಗಳನ್ನು ಕೊಟ್ಟಿದ್ದಾರೆ; ವಿಷಯ ಸಂಗ್ರಹವು ಒಳ್ಳೇ ಪರಿಶ್ರಮದಿಂದ ಆರಿಸಿಕೊಳ್ಳಲ್ಪಟ್ಟಿದೆಯಲ್ಲದೆ ಕೆಲವು ಕಡೆಗಳಲ್ಲಿ ಮೂಲಗ್ರಂಥಗಳಿಂದಲೇ ಆಯ್ದುಕೊಳ್ಳಲಾಗಿದೆ.

ಶ್ರೀಮಾನ್ ಲಕ್ಕುಂಡಿಯವರು ಶಿಕ್ಷಣ ಪ್ರಪಂಚದಲ್ಲಿ ಒಳ್ಳೇ ಹೆಸರಾದ ತಜ್ಞರೆಂದೂ ಇತಿಹಾಸ ಕಲಿಸುವದರಲ್ಲಿ ನುರಿತ ಶಿಕ್ಷಕರೆಂದೂ ನಮ್ಮ ಕನ್ನಡ ನಾಡಿನಲ್ಲಿ ಪ್ರಸಿದ್ಧಿಯನ್ನು ಹೊಂದಿದ್ದಾರೆ. ಅವರು ತಮ್ಮ ಅನುಭವಗಳನ್ನೇ ಇಲ್ಲಿ ಇಡಲು ಹೊರಟಿದ್ದಾರೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಅದರಂತೆ ಶ್ರೀ. ದೂದಿಹಳ್ಳಿ ಹುಚ್ಚರಾಯರು ಅನುಭವಿಕ ಶಿಕ್ಷಕರೆಂದೂ ಉತ್ತಮ ಬರಹಗಾರರೆಂದೂ ನಮ್ಮ ನಾಡಿನ ಶಿಕ್ಷಣಪ್ರಪಂಚಕ್ಕೆ ಪರಿಚಿತರಿದ್ದಾರೆ.

ಜೀವನ ಶಿಕ್ಷಣದ ತತ್ತ್ವಗಳು ಜನಪ್ರಿಯವಾಗುತ್ತ ಹೋದಂತೆ ಅವುಗಳ ತಳಹದಿಯ ಮೇಲೆ ರಚಿತವಾದ ಅಭ್ಯಾಸ ಪತ್ರಿಕೆಗನುಸರಿಸಿ ಬರೆದ ಸಾಹಿತ್ಯದ ಕೊರತೆ ದೇಶದಲ್ಲೆಲ್ಲ ಕಂಡುಬರುತ್ತಿದ್ದಾಗ ಶ್ರೀ. ಲಕ್ಕುಂಡಿ ರಂಗರಾಯರು ಹಾಗೂ ದೂದಿಹಳ್ಳಿ ಹುಚ್ಚರಾಯರು ಬರೆದ ಭಾರತೀಯ ಇತಿಹಾಸ ಪ್ರಕಾಶದ ಮೊದಲನೆಯ ಪುಸ್ತಕವನ್ನು ಎಲ್ಲ ಶಿಕ್ಷಣಾಭಿಮಾನಿಗಳು ಸ್ವಾಗತಿಸುವದರಲ್ಲಿ ಸಂದೇಹವಿಲ್ಲ. ನಮ್ಮ ಇಲಾಖೆಯ ಜನೆಯ ಇಯತ್ತೆಯ ಬಾಲಕರಿಗೆ ಹಾಗು ಶಿಕ್ಷಕರಿಗೆ ಈ ಪುಸ್ತಕವು ಉಪಯುಕ್ತವಾಗುವದೆಂದು ಎಣಿಸುತ್ತೇನೆ. ಇದರಂತೆ ಮುಂದಿನ ಎರಡು ತರಗತಿಗಳಿಗೆ ಉಪಯೋಗವಾಗುವಂತೆ ಮುಂದಿನ ಎರಡು ಪುಸ್ತಕಗಳು ಅವರ ಲೆಕ್ಕಣಿಕೆಯಿಂದ ಬೇಗ ಹೊರಬೀಳಲೆಂದು ಹಾರೈಸುತ್ತೇನೆ.

ಪದವೀಧರರ ಜೀವನ ಶಿಕ್ಷಣ
ಕೇಂದ್ರ, ಧಾರವಾಡ.

ತೇರಗಾಂವಕರ ಕೃಷ್ಣರಾಯ

೮—೨—೫೦

# ಅರ್ಪಣೆ

ನನ್ನ ಎಲ್ಲ ಶ್ರೇಯಸ್ಸಿಗೂ
ಕಾರಣೀಭೂತರಾದ
ನನ್ನ ಪೂಜ್ಯ
**ಮಾತೃಶ್ರೀ**
ಅವರಿಗೆ
ಈ ಹೊತ್ತಿಗೆಯು
ಭಕ್ತಿ ಪುರಸ್ಸರವಾಗಿ
ಅರ್ಪಣೆ
ರಂ. ಕೃ. ಲಕ್ಕುಂಡಿ

ತನ್ನ ಕಷ್ಟನಷ್ಟಗಳಲ್ಲಿಯೂ
ನನ್ನನ್ನು ಪರಿಪರಿಯಿಂದ
ಹೆತ್ತಮ್ಮನಂದದಿ,
ಸಾಕಿ ಬೆಳಸಿ ಬೆಳಕನ್ನು ತೋರಿದ
**ಮಾತೃದೇವತೆಗೆ**
ಈ ಕೃತಿಯು
ಅರ್ಪಿತ.
ಎಚ್. ಎಸ್. ದೂದಿಹಳ್ಳಿ.

# ೧ನೆಯ ಪ್ರಕರಣ



ಚಿತ್ರ ೧. ಸೃಷ್ಟಿಪರಿಚಯ



ಚಿತ್ರ ೨. ಜೀವನ ಉತ್ಕ್ರಾಂತಿ.



ಚಿತ್ರ ೩. ಹಳೆಯ ಶಿಲಾಯುಗದ ಜನರ ಆಯುಧಗಳು.



ಚಿತ್ರ ೪. ಹಳೆಯ ಶಿಲಾಯುಗದ ಜನರ ಆಚ್ಛಾದನ.



ಚಿತ್ರ ೫. ಹಳೆಯ ಶಿಲಾಯುಗವ ಜನರ ಆಶ್ರಯ.



ಚಿತ್ರ ೬. ಹಳೆಯ ಶಿಲಾಯುಗದ ಜನರ ಆಹಾರ ಮತ್ತು ಅದನ್ನು ದೊರಕಿಸುವ ರೀತಿ.

## ೧ನೆಯ ಪ್ರಕರಣ

## ಪ್ರಾಚೀನ ಕಾಲ.

### ಪೃಥ್ವಿಯ ಹುಟ್ಟು ಹಾಗೂ ಪ್ರಾಚೀನ ಜನಜೀವನ.

### (೧) ಪೃಥ್ವಿಯ ಹುಟ್ಟು :—

ಬಾಲಕರೇ, ನೀವು ನಿಮ್ಮ ಶಾಲೆಯ ಆಟದ ಬಯಲಿನಲ್ಲಿ ನಿಂತು ಸುತ್ತಲೂ ನೋಡಿದರೆ ನಿಮಗೆ ಏನು ಕಂಡುಬರುವದು ?

ವಿಶಾಲವಾದ ಆಕಾಶವು ನಾವು ವಾಸಿಸುವ ನೆಲವನ್ನು ಮುಚ್ಚಣಿಕೆಯಂತೆ ಮುಚ್ಚಿರುವದು ಕಂಡುಬರುವದು. ಅದರಲ್ಲಿ, ಹಗಲಿನಲ್ಲಿ ಸೂರ್ಯನೂ ರಾತ್ರಿಯಲ್ಲಿ ಚಂದ್ರನೂ ತಾರೆಗಳೂ ತಪ್ಪದೆ ಮೂಡುವವು. ಕೆಲವು ದಿನಗಳವರೆಗೆ ರಾತ್ರಿಯಲ್ಲಿ ಚಂದ್ರನು ಬೆಳೆಯುತ್ತ ಸಾಗಿ ಹುಣ್ಣಿಮೆಯ ದಿನ ಆತನ ಪೂರ್ಣ ಬಿಂಬವು ಕಣ್ಣಿಗೆ ಬೀಳುವದು. ಇವುಗಳಲ್ಲದೆ ಗುಡ್ಡಗಳೂ ಹೊಳೆ-ಹಳ್ಳಗಳೂ ಗಾಳಿ—ಮಳೆಗಳ ಇರುವಿಕೆಯೂ ನಮಗೆ ತಿಳಿದುಬರುವದು.

ಬಾಲಕರೇ, ಇವುಗಳೆಲ್ಲ ಹೇಗೆ ಹುಟ್ಟಿಬಂದವು ?

ಎಷ್ಟೋ ಕೋಟಿ ವರುಷಗಳ ಪೂರ್ವದಲ್ಲಿ ಇಂದು ನಮಗೆ ಕಾಣುವ ಸೂರ್ಯ, ಚಂದ್ರ, ತಾರೆಗಳು, ಹೊಳೆ—ಹಳ್ಳ, ಗುಡ್ಡ ಮೊದಲಾದವುಗಳು ಇರಲಿಲ್ಲ. ಆಕಾಶವೆಂದು ನಮಗೆ ಗೋಚರಿಸುವ ಅನಂತ ವಿಶ್ವದಲ್ಲಿ ಅಲ್ಲಲ್ಲಿ ತೇಜೋ-ಮೇಘಗಳು ಒಂದನ್ನೊಂದು ಕೂಡಿಕೊಂಡು ಹೆಚ್ಚೆಚ್ಚು ಬೆಳಕನ್ನು ಬೀರಹತ್ತಿದವು. ಆಕಾಶದಲ್ಲಿ ನಮಗೆ ಕಾಣುವ ಸೂರ್ಯನೂ ಇಂಥ ತೇಜೋಮೇಘಗಳ ಒಂದು ರಾಶಿಯೇ ಆಗಿರುವನು. ಸೂರ್ಯನ ವಯಸ್ಸು ಬಲು ದೊಡ್ಡದು.

ಅದು ನನ್ನ ಕಲ್ಪನೆಗೆ ಬಾರದಷ್ಟು ದೊಡ್ಡದು.[೧] ಕಾಲ ಕಳೆದಂತೆ, ಸೂರ್ಯನಿಗೆ ಗತಿ (ಚಲನೆ)ಯು ದೊರೆಯಿತು. ಇಂದಿಗೆ ಎಷ್ಟೋ[೨] ಕೋಟಿ ವರುಷಗಳ ಹಿಂದೆ, ಈ ವೇಗವಾಗಿ ತಿರುಗುವ ಸೂರ್ಯನಿಂದ ಒಂದು ಭಾಗವು ಸಿಡಿದು ಬಂದಿತು. ಇದರಲ್ಲಿ ಕಾವು ಕಡಿಮೆಯಾದಂತೆ, ಇದರ ಮೇಲ್ಭಾಗವು ತಣ್ಣಗಾಗ ಹತ್ತಿತು. ಬರಬರುತ್ತ[೩] ಇದು ದ್ರವರೂಪ ಹೊಂದಿ ಗಟ್ಟಿಯಾಯಿತು. ಇದೇ ಇಂದು ನಾವು ವಾಸಿಸುವ ಪೃಥ್ವಿ. ಇದರ ಮೇಲೆ ನೀರು, ನೆಲ, ಹವೆಗಳು ಅನಂತರೂಪದಲ್ಲಿ ಕಂಡುಬರುವವು. ಹವೆಯು ಪೃಥ್ವಿಯನ್ನು ಸುತ್ತಿಕೊಂಡು ೨೦೦ ಮೈಲುಗಳ ಮೇಲಕ್ಕೆ ತಲುಪಿರುವದು. ಮೂರುಪಾಲು ನೀರು, ಒಂದು ಪಾಲು ನೆಲವು ಪೃಥ್ವಿಯ ಮೇಲ್ಮೈಯನ್ನು ಆವರಿಸಿವೆ. (ಚಿತ್ರ ೧)

ನೀರು, ನೆಲ, ಆಕಾಶ, ಹವೆ, ಬೆಳಕು ಇವು ಒಂದು ಹದಕ್ಕೆ ಬಂದಾಗ ಹಾಲಿನ ಮೇಲೆ ಕೆನೆಯಂತೆ ನೀರಿನ ಮೇಲೆ ಜೀವರಾಶಿಗಳು ಹುಟ್ಟಿಬಂದವು. ಮೊದಲು ಇವು ಹಾವಸೆಯ ಕಣಗಳಂತೆ ತೋರಿದವು. ಒಂದೇ ಕಣವು ಶರೀರವಾಗಿದ್ದ ಈ ಜೀವಿಗಳು (ಏಕಾಣುಜೀವಿಗಳು) ತಮ್ಮ ಆಹಾರ, ಸೌಖ್ಯಗಳಿಗಾಗಿ ಹೆಣಗಹತ್ತಿದವು. ಇದರ ಪರಿಣಾಮವಾಗಿ ಮುಳೆಹುಳದಂಥ ಬೆನ್ನೆಲುಬಿಲ್ಲದ ಪ್ರಾಣಿಗಳು ತಲೆದೋರಿದವು. ಕಾಲ ಕಳೆದಂತೆ, ಹಾವು, ಪಕ್ಷಿ, ಪಶುಗಳು ತಲೆದೋರಿದವು. ಇವುಗಳ ದೇಹದಲ್ಲಿ ಬೆನ್ನೆಲುಬು ಒಳ್ಳೇ ಆಧಾರ ಕೊಡುವಂತಹದು. ಇವು ಮೊದಮೊದಲು ನೀರಿನಲ್ಲಿ ವಾಸಿಸಿದವು. ಇವುಗಳ ಒಂದು ಪಂಗಡದಲ್ಲಿ ಉಸಿರುಚೀಲ (ಫುಪ್ಫುಸ) ಹಾಗೂ ಅವಯವಗಳು ಬೆಳೆದಂತೆ, ಆ ಪಂಗಡದ ಪ್ರಾಣಿಗಳು ಬರಬರುತ್ತ ನೀರು ಮತ್ತು ನೆಲ ಗಳೆರಡರಲ್ಲೂ ಇರತೊಡಗಿದವು. ಬಳಿಕ ಬೆಳವಣಿಗೆಯಲ್ಲಿ ಮತ್ತೂ ಎಷ್ಟೋ ಬದಲಾವಣೆಗಳಾದನಂತರ ಮಂಗನ ರೂಪವು ಮಾರ್ಪಟ್ಟು ಕಾಣಹತ್ತಿತು. ಮುಂದೆ ಗೋರಿಲ್ಲಾ (ಒಂದು ಜಾತಿಯ ಮಂಗ) ನಿಂದ ಮನುಷ್ಯನ ಶರೀರವು ಮಾರ್ಪಟ್ಟಿತೆಂದು ಹೇಳಿಕೆ ಇದೆ. ಒಟ್ಟಿನಲ್ಲಿ, ನಮ್ಮಂಥ ದೇಹರಚನೆಯಿದ್ದ ಮನುಷ್ಯನು ಪೃಥ್ವಿಯ ಮೇಲೆ ಕಂಡುಬಂದುದು ಸುಮಾರು ೫೦,೦೦೦ ವರುಷ ಗಳಿಂದೀಚೆಗೆ ಎಂದು ಹೇಳಲಾಗುತ್ತದೆ. ಆದರೆ ಭೂಮಿಯಲ್ಲಿ ದೊರೆತ ಅವಶೇಷ

೧. ಏಳೆಂಟು ಸಾವಿರ ದಶಕೋಟಿ ವರುಷಗಳು. ೨. ಸುಮಾರು ೨೦ ದಶಕೋಟಿ ವರುಷಗಳು. ೩. ಹದಿನೈದು ದಶಕೋಟಿ ವರುಷಗಳ ಹಿಂದೆ.

ಗಳನ್ನು ಪರೀಕ್ಷಿಸಿ ಕೆಲವರು ಮನುಷ್ಯನಿಗೆ ಇದಕ್ಕೂ ಹೆಚ್ಚು ಪ್ರಾಚೀನತೆ ಕೊಡುವರು. ಏನಿಲ್ಲೆಂದರೂ ೩ ಲಕ್ಷ ವರುಷಗಳಿಂದ ಮನುಷ್ಯನು ಭೂಮಿಯ ಮೇಲೆ ವಾಸಿಸುತ್ತಿರುವನೆಂದು ಅವರ ಅಭಿಪ್ರಾಯ. ( ಚಿತ್ರ ೨ )

## ( ೨ ) ಪ್ರಾಚೀನ ಜನಜೀವನ:—

ಮೊದಮೊದಲು ಮನುಷ್ಯನು ಇತರ ಪ್ರಾಣಿಗಳಂತೆ ಆಹಾರ, ನಿದ್ರೆ ಮುಂತಾದ ಕಾರ್ಯಗಳನ್ನಷ್ಟೇ ಮಾಡುತ್ತಿದ್ದನು. ಅಂಜಿಕೆಯೂ ಅವನಲ್ಲಿತ್ತು. ಆದರೆ ಮನಸ್ಸಿನಲ್ಲಿಯ ಭಾವನೆಗಳನ್ನು ( ಸುಖ, ದುಃಖ, ಸಿಟ್ಟು, ಸಂತೋಷ ಮುಂತಾದವುಗಳನ್ನು ) ತಿಳಿಸುವ ಕೂಗುಗಳೇ ಆಗಿನ ಕಾಲದ ಜನರ ಮಾತು ಗಳಾಗಿರಬಹುದು.

ಆಗಿನ ಕಾಲಕ್ಕೆ ಮನುಷ್ಯನು ತನ್ನ ಪ್ರತಿಯೊಂದು ಕೆಲಸಕ್ಕೂ ಒಂದಿ ಲ್ಲೊಂದು ತರದ ಕಲ್ಲನ್ನೇ ಉಪಯೋಗಿಸಿದನು. ಆತನ ಆಯುಧ, ಉಪ- ಕರಣಗಳೆಲ್ಲವೂ ಕಲ್ಲಿನವೇ ಆಗಿದ್ದವು. ಆದ್ದರಿಂದ, ಈ ಕಾಲಕ್ಕೆ 'ಶಿಲಾಯುಗ' ವೆಂದು ಕರೆಯುತ್ತಾರೆ. ಇದರಲ್ಲಿ ಹಳೆಯ ( ಪ್ರಾಚೀನ ) ಶಿಲಾಯುಗ ಮತ್ತು ಹೊಸ ( ನೂತನ ) ಶಿಲಾಯುಗಗಳೆಂದು ಎರಡು ಭಾಗಗಳಿರುವವು. ( ಶಿಲಾ ಯುಗದಲ್ಲಿ ಕಲ್ಲಿನ ಜೊತೆಗೆ ಕಟ್ಟಿಗೆಯ ತುಂಡು ಸತ್ತ ಪ್ರಾಣಿಗಳ ಎಲುಬು ಗಳೂ ಮನುಷ್ಯನಿಗೆ ಉಪಯೋಗ ಬೀಳಹತ್ತಿದವು. )

### ಅ. ಹಳೆಯ ಶಿಲಾಯುಗ

ಇದು ಶಿಲಾಯುಗದ ಆರಂಭಕಾಲ. ಈ ಕಾಲದಲ್ಲಿ ಮನುಷ್ಯನು ಕಲ್ಲಿನ ಆಯುಧಗಳನ್ನು ಹದನ ಅಥವಾ ಚೂಪಾಗಿ ಮಾಡುವ ವಿಧಾನವನ್ನು ಕಂಡು ಹಿಡಿದನು. ( ಚಿತ್ರ ೩ )

ಸತ್ತ ಪ್ರಾಣಿಗಳ ಚರ್ಮವನ್ನೂ ಗಿಡದ ತೊಗಟೆಯನ್ನೂ ತೊಪ್ಪಲದ ಗುಂಪನ್ನೂ ಮೈಗೆ ಸುತ್ತಿಕೊಂಡು ಮನುಷ್ಯನು ಚಳಿ, ಬಿಸಿಲುಗಳಿಂದ ತನ್ನನ್ನು ಸಂರಕ್ಷಿಸಿಕೊಂಡನು. ( ಚಿತ್ರ ೪ )

ಗಿಡದ ಹೊದರು, ಕಲ್ಲುಬಂಡೆಗಳ ಪೊಳ್ಳು ಮತ್ತು ಗವಿಗಳು ಆ ಕಾಲದ ಮನುಷ್ಯನ ವಸತಿಗಳಾಗಿದ್ದವು. ( ಚಿತ್ರ ೫ )

ಆಗಿನ ಮನುಷ್ಯನು ಬೇಟೆಯಿಂದಲೇ ಉಪಜೀವಿಸುತ್ತಿದ್ದನೆಂದು ಹೇಳಬಹುದು. ಆಹಾರಕ್ಕಾಗಿ ಬೇಟೆಯಾಡಿ ಹಸಿ ಮಾಂಸವನ್ನೂ ಗಿಡ–ಬಳ್ಳಿಗಳಿಂದ ಹಣ್ಣು ಮುಂತಾದವುಗಳನ್ನೂ ದೊರಕಿಸಿಕೊಂಡನು. ನಂಬಿಕೆಯ ಪ್ರಾಣಿಯಾದ ನಾಯಿಯು ಬೇಟೆಯ ವೇಳೆಯಲ್ಲಿ ಅವನಿಗೆ ಉಪಯೋಗಬಿದ್ದಿರಬಹುದು. ( ಚಿತ್ರ ೬ )

## ಆ. ಹೊಸ ಶಿಲಾಯುಗ

ಈ ಕಾಲದಲ್ಲಿ ಮನುಷ್ಯನು ಕಲ್ಲಿನ ಆಯುಧಗಳನ್ನು ಹದನಗೊಳಿಸುವ ಬೇರೆ ವಿಧಾನಗಳನ್ನು ಶೋಧಿಸಿದನು. ಇಲ್ಲಿಯವರೆಗಿನಂತೆ ಆಯುಧಗಳನ್ನು ಕಟಿದು ಹದನಗೊಳಿಸುವದನ್ನು ಬಿಟ್ಟು, ಅವನ್ನು ತಿಕ್ಕಿ ಇಲ್ಲವೆ ಮಸೆದು ಹದನಗೊಳಿಸಹತ್ತಿದನು. ಜೊತೆಗೆ, ಅವುಗಳಿಗೆ ಹೊಳಪು ಕೊಡುವ ವಿಧಾನವು ಆತನಿಗೆ ತಿಳಿಯಹತ್ತಿತು. ಆಗ ಅವನಿಗೆ ಬೆಂಕಿಯ ಉಪಯೋಗ ಗೊತ್ತಿರಲಿಲ್ಲ.

ಈ ಶಿಲಾಯುಗದ ಜನರು ದಕ್ಷಿಣ ಹಿಂದುಸ್ತಾನದಲ್ಲಿಯೂ ವಾಸವಾಗಿದ್ದರೆಂದು ಹೇಳಲು ಆಧಾರಗಳಿವೆ. ರಾಮಾಯಣದಲ್ಲಿ ಕಂಡು ಬರುವ ಕಿಷ್ಕಿಂಧೆಯ ವಾನರರು ಗವಿಗಳಲ್ಲಿ ವಾಸವಾಗಿದ್ದರೆಂದು ನಂಬಲಾಗಿದೆ. ಹಂಪೆಯ ಸಮೀಪದಲ್ಲಿ ಈಗಲೂ ಎಷ್ಟೋ ಗುಹೆಗಳು ನೋಡಲು ಸಿಗುತ್ತವೆ.

ಎಷ್ಟೋ ಕಾಲ ಗತಿಸಿದ ಮೇಲೆ, ಬೇರೆ ಗುಂಪಿನ ಜನರು ಈಶಾನ್ಯದಿಕ್ಕಿನಿಂದ ಭಾರತದಲ್ಲಿ ಪ್ರವೇಶಮಾಡಿದರು. ಇವರು ಇಲ್ಲಿ ಮೊದಲಿದ್ದವರನ್ನು ಸೋಲಿಸಿ, ಅವರನ್ನು ಬೇರೆ ಕಡೆಗೆ ಅಟ್ಟಿದರು. ಇವರಾದರೂ. ತಮ್ಮ ಆಯುಧಗಳಿಗಾಗಿ ಕಲ್ಲನ್ನೆ ಉಪಯೋಗಿಸಿದರು. ಲೋಹವನ್ನು ಕಂಡಿರಲಿಲ್ಲ. ಆದರೆ ಕಲ್ಲಿನಿಂದ ಅಚ್ಚುಕಟ್ಟಾದ ಕೊಡಲಿ, ಭರ್ಚಿ, ಚೂರಿ, ಬಾಣಗಳನ್ನು ಮಾಡಿಕೊಂಡು ಅವುಗಳನ್ನು ಉಪಯೋಗಿಸಿದರು. ಬೆಂಕಿಯ ಉಪಯೋಗವನ್ನು ಕಂಡುಹಿಡಿದರು. ಮನೆಗಳನ್ನು ಕಟ್ಟಿಕೊಂಡು ಅವುಗಳಲ್ಲಿ ವಾಸಮಾಡಹತ್ತಿದರು. ಸಾಕುವ ಪ್ರಾಣಿಗಳಾದ ನಾಯಿ, ದನ, ಆಡು, ಕುರಿಗಳು ಇವರಿಗೆ ಗೊತ್ತಿದ್ದವು. ಭೂಮಿಯ ಸಾಗುವಳಿಯೂ ಇವರಿಗೆ ಗೊತ್ತಿತ್ತು. ದನಕರುಗಳನ್ನು ಕಟ್ಟಿಕೊಂಡು ಬೇಸಾಯ ( ಒಕ್ಕಲತನ ) ನಡೆಯುವಲ್ಲಿ ಇವರು

ಒಕ್ಕಲಾದರು. ತಮ್ಮ ಆಯುಧಗಳನ್ನು ಒಳ್ಳೇ ನಾಜೂಕಾಗಿ ಮಾಡಿಕೊಳ್ಳು ತ್ತಿದ್ದರು. ಕಲ್ಲಿನಿಂದಲೂ ಮಣ್ಣಿನಿಂದಲೂ ಮಾಡಿದ ಪಾತ್ರೆಗಳನ್ನು ಉಪ ಯೋಗಿಸುತ್ತಿದ್ದರು.

## ಅಭ್ಯಸನಗಳು

೧. ಜೀವನ ಉತ್ಕ್ರಾಂತಿ ಚಿತ್ರದಲ್ಲಿಯ ಪ್ರಾಣಿಗಳನ್ನು ಗುರುತಿಸಿರಿ.

೨. ಕೆಳಗೆ ಕೊಟ್ಟಿರುವ ವಾಕ್ಯಗಳಲ್ಲಿ ತೆರವಿರುವ ಸ್ಥಳಗಳನ್ನು ಯೋಗ್ಯ ಶಬ್ದಗಳಿಂದ ತುಂಬಿರಿ: —

ಅ. ಆಕಾಶವು...........ಮುಚ್ಚಣಿಕೆಯಂತೆ ಮುಚ್ಚಿರುವದು.

ಆ. ಆಕಾಶದಲ್ಲಿ ಕಾಣುವ...........ತೇಜೋಮೇಘಗಳ ಒಂದು ರಾಶಿಯೇ ಆಗಿರುವನು.

ಇ. ಪೃಥ್ವಿಯ ಮೇಲೆ........ಪಾಲು ನೀರು, ........ಪಾಲು ನೆಲ ವಿರುವವು.

ಈ. ...............ನಿಂದ ಮನುಷ್ಯನ ಶರೀರವು ಮಾರ್ಪಟ್ಟಿತೆಂದು ಹೇಳಿಕೆಯಿದೆ.

೩. ಕೆಳಗೆ ಕೊಟ್ಟಿರುವ ಪ್ರತಿಯೊಂದು ಸಂಗತಿಯನ್ನು ಕುರಿತು ಒಂದೊಂದು ವಾಕ್ಯ ಬರೆಯಿರಿ :

ಅ. ಶಿಲಾಯುಗದ ಮನುಷ್ಯನ ಆಹಾರ.

ಆ. ಶಿಲಾಯುಗದ ಮನುಷ್ಯನ ಆಶ್ರಯ.

ಇ. ಶಿಲಾಯುಗದ ಮನುಷ್ಯನ ಆಚ್ಛಾದನ.

ಈ. ಈಶಾನ್ಯ ದಿಕ್ಕಿನಿಂದ ಬಂದ ಜನರ ಗುಂಪು.

---

# ೨ನೆಯ ಪ್ರಕರಣ




ಚಿತ್ರ ೧. ನಾಗರಿಕತೆಯ ಪ್ರಥಮ ನೆಲೆವೀಡುಗಳು. ( ನೈಲ, ಯುಫ್ರೆಟಿಸ್, ಸಿಂಧು, ಗಂಗಾ ಮತ್ತು ಹೋ-ಆಂಗ-ಹೊ ನದೀತೀರಗಳು )



ಚಿತ್ರ ೨. ಮೆನಾ (ಮೆನಾಸ್)- ಜಗತ್ತಿನಲ್ಲಿಯ ಮೊದಲನೆಯ ಅರಸು·
(ಕ್ರಿ. ಪೂ. ೪೫೦೦)



ಚಿತ್ರ ೩ ಅ. ಪ್ರಾಚೀನ ಇಜಿಪ್ತದ ಹಡಗುಗಳು—ಸರಕುಗಳ ಹಡಗು.



 ಚಿತ್ರ ೩. ಬ. ಪ್ರಾಚೀನ ಇಜಿಪ್ತದ ಹಡಗುಗಳು—ಕಾಳಗದ ಹಡಗು.



ಚಿತ್ರ ೪. ಇಜಿಪ್ತದಲ್ಲಿಯ ‘ ಪಿರಮಿಡ್ ’



ಚಿತ್ರ ೫. ಚೀನದ ಅತಿ ದೊಡ್ಡ ಗೋಡೆ



ಚಿತ್ರ ೬. ಮೊಹೆಂಜೊದಾರೊದಲ್ಲಿಯ ಸಾರ್ವಜನಿಕ ಸ್ನಾನದ ಸ್ಥಳ.



ಚಿತ್ರ ೭. ಮೊಹೆಂಜೊದಾರೊದಲ್ಲಿಯ ಕೆಲವು ಆಭರಣಗಳು.



ಚಿತ್ರ ೮. ಮೊಹೆಂಜೊದಾರೊದ ಸರಕಾರದ ಮುದ್ರೆ.




ಚಿತ್ರ. ೯. ಗಂಗಾನದಿಯ ದಂಡೆಯಲ್ಲಿಯ ಒಂದು ತಪೋವನ.

# ೨ನೆಯ ಪ್ರಕರಣ

## ನಾಗರಿಕತೆಯ ಪ್ರಥಮ ನೆಲೆವೀಡುಗಳು.

### (ನೈಲ, ಯುಫ್ರೆಟಿಸ್, ಸಿಂಧು, ಗಂಗಾ ಮತ್ತು ಹೊ–ಅಂಗ–ಹೊ ನದೀತೀರಗಳ ಸಂಸ್ಕೃತಿಗಳು.

ಬಾಲಕರೆ, ಪ್ರಾಚೀನಕಾಲದ ಶಾಶ್ವತವಾದ ನೆಲೆವೀಡುಗಳು ದೊಡ್ಡ ನದೀತೀರಗಳಲ್ಲಿಯೇ ಸ್ಥಾಪಿತವಾದವು. ಇದು ಏಕೆ?

ಮೊದಮೊದಲು ಮನುಷ್ಯನು ತನ್ನ ಆಹಾರವನ್ನು ಬೇಟೆಯಿಂದಲೇ ದೊರಕಿಸಿಕೊಂಡನಷ್ಟೆ. ಮುಂದೆ ತನ್ನ ದನಕರುಗಳ ಆಹಾರಕ್ಕಾಗಿ ಅವನು ಹುಲ್ಲುಗಾವಲುಗಳು ಇದ್ದಲ್ಲಿಗೆ ಹೋಗಬೇಕಾಯಿತು. ಆಗ ಅವನು ತನ್ನ ಆಹಾರಕ್ಕಾಗಿ ಅಲ್ಲಿ ಕಾಡುಹುಲ್ಲುಗಳಿಂದ ದೊರೆತ ಬೀಜಗಳನ್ನು ಉಪಯೋಗಿಸಿದನು. ಅಕಸ್ಮಾತ್ತಾಗಿ ಅವು ನೆಲದ ಮೇಲೆ ಬಿದ್ದಾಗ ಮಳೆಯ ನೀರಿನಿಂದ ಅವು ಮೊಳೆತವು. ಇದು ಆಗಿನ ಜನರಿಗೆ ತಿಳಿದುಬಂದಿತು. ಅಂದಿನಿಂದ ಅವರು ನೆಲವನ್ನು ಅಗಿದು, ಬೀಜಗಳನ್ನು ಬಿತ್ತಿ, ಬೆಳೆಗಳನ್ನು ತೆಗೆದುಕೊಳ್ಳುವ ಕ್ರಮವನ್ನು ರೂಢಿಯಲ್ಲಿ ಇಟ್ಟುಕೊಂಡರು. ಸಂಸ್ಕೃತಿಯು ತೀರ ಕೆಳಮಟ್ಟದಲ್ಲಿದ್ದ ಆಗಿನ ಪರಿಸ್ಥಿತಿಯಲ್ಲಿ ಜನರಿಗೆ ನೀರಿನ ಅವಿರತವಾದ ಪೂರೈಕೆ, ಬಿಸಿಲು, ಬೆಳಕು ಇವುಗಳು ಅತ್ಯವಶ್ಯವಿದ್ದವು. ನೀರಿಲ್ಲದೆ ಜೀವನವು ಸಾಗದು. ಸಸಿಗಳ ಬೆಳವಣಿಗೆಗೂ ಅದು ಅಗತ್ಯ. ಈ ಕಾರಣಗಳಿಗಾಗಿ, ಶಾಶ್ವತ ನೆಲೆವೀಡುಗಳಿಗೆ ನದೀತೀರಗಳೇ ಆಗಿನ ಜನರಿಗೆ ಯೋಗ್ಯ ಸ್ಥಳಗಳೆಂದು ಎನಿಸಿದವು. ಬೇಟೆಯಾಡುವದು ಮತ್ತು ಹುಲ್ಲುಗಾವಲುಗಳನ್ನು ಶೋಧಿಸುತ್ತ ಹೋಗುವದು ಉಪಜೀವನದ ಅನಿಶ್ಚಿತ ಮಾರ್ಗಗಳೆಂದು ಅವರಿಗೆ ಮನವರಿಕೆಯಾಯಿತು. ಆದ್ದರಿಂದಲೇ ಆಗಿನ ಜನರು ಭೂಮಿಯ ಮೇಲಿನ ದೊಡ್ಡ ದೊಡ್ಡ ನದೀತೀರಪ್ರದೇಶಗಳಲ್ಲಿಯೇ ನೆಲಸಿದರು. ನೈಲ, ಯುಫ್ರೆಟಿಸ್, ಟೈಗ್ರಿಸ, ಹೊ–ಅಂಗ–ಹೊ, ಗಂಗಾ ಇವೇ ಆ ನದಿಗಳು.

ಮೇಲೆ ಕಾಣಿಸಿದ ನದೀತೀರಗಳಲ್ಲಿಯ ಜನರು ಬೇಸಾಯದಲ್ಲಿ ತಮ್ಮ ಮನಸ್ಸು ಹಾಕಿದರು. ನದಿಗಳ ದಂಡೆಗಳು ಬಹಳ ಫಲವತ್ತಾದ ಪ್ರದೇಶಗಳಿದ್ದುದು ಅವರಿಗೆ ಕಂಡುಬಂದದ್ದರಿಂದ ಬೇಸಾಯವು ಆ ಜನರ ಮುಖ್ಯ ಉದ್ಯೋಗವಾಗಹತ್ತಿತು. ಕಾಲವು ಕಳೆದಂತೆ, ನದಿಗಳ ದಂಡೆಯಲ್ಲಿಯ ಅಡವಿಗಳನ್ನು ಕಡಿದು ಹೊಲಗಳನ್ನು ಮಾಡುವ ಕ್ರಮವು ನಡೆಯಿತು. ಆದರೆ ಕೆಲವು ಪಂಗಡಗಳಿಗೆ ಆಹಾರಕ್ಕಾಗಿ ದುಡಿಯುವದು ರುಚಿಸಲಿಲ್ಲ. ಇವರು ಅದಕ್ಕಾಗಿ ಅಲೆದಾಡುವ ಪರಿಪಾಠವನ್ನೇ ಮುಂದುವರಿಸಿದರು.

ನದೀತೀರಗಳಲ್ಲಿ ನೆಲಸಿದ ಜನರು ಬರಬರುತ್ತ ಗ್ರಾಮಗಳಲ್ಲಿ ವಾಸಿಸಹತ್ತಿದರು. ಗ್ರಾಮಜೀವನವು ಬೆಳೆಯತೊಡಗಿತು. ದಿನದ ಉಪಯೋಗಕ್ಕಾಗಿ ಅವರು ಗಡಿಗೆ-ಮಡಿಕೆಗಳನ್ನು ತಯಾರಿಸಿದರು. ಅವು ತೀವ್ರವಾಗಿ ತಯಾರಾಗಲಿಕ್ಕೆಂದು ಕುಂಬಾರನ ತಿಗುರಿಯ ಸಂಶೋಧನೆಯಾಯಿತ್ತು. ಹೀಗೆ ತಯಾರಾದ ಗಡಿಗೆಮಡಿಕೆಗಳ ಮೇಲೆ ಚಿತ್ರಕಲೆಯ ಕೆಲಸವಾದುದು ಕೂಡ ಕಂಡುಬಂದಿದೆ.

ಈ ಕಾಲದಲ್ಲಿ ಅಡವಿಗಳಿಂದ ಕಟ್ಟಿಗೆಯನ್ನು ತರಲಿಕ್ಕೆ ಮತ್ತು ಹೊಲಗಳಿಂದ ಧಾನ್ಯಗಳನ್ನು ತರಲಿಕ್ಕೆ ಉಪಯೋಗಿಸಿದ ಭೂಭಾಗವು 'ಹಾದಿ' ಎನಿಸಿತು. ಬಹು ಜನರು ಆದೇ ಭೂಭಾಗವನ್ನು ತುಳಿದಾಗ ಅದು 'ಕಾಲುದಾರಿ' ಯಾಯಿತು. ಮಳೆ ಬೀಳಲು ಅಲ್ಲಲ್ಲಿ ಕಂಡುಬರುವ ಜವುಳು, ಚಿಕ್ಕ ಹಳ್ಳ ಮುಂತಾದವುಗಳನ್ನು ದಾಟಲು ಆಗಿನ ಜನರು ಮೊದಮೊದಲು ಗಿಡಗಳ ಭಾರವಾದ ಟೊಂಗೆ ಮತ್ತು ಉದ್ದವಾದ ಕಲ್ಲುಗಳನ್ನು ಉಪಯೋಗಿಸಿದರು. ಇವೇ ಬರಬರುತ್ತ ಸೇತುವೆಯ ರೂಪವನ್ನು ತಾಳಿದವು. ಕಟ್ಟಿಗೆಯನ್ನು ಸಾಗಿಸಲಿಕ್ಕೆ ಎಷ್ಟೋಸಲ ಅವರು ನದಿಯ ನೀರಿನ ಉಪಯೋಗವನ್ನೇ ಮಾಡಿಕೊಂಡರು. ಗ್ರಾಮಗ್ರಾಮಗಳಲ್ಲಿ ಸಂಪರ್ಕವು ಹೆಚ್ಚಾಗಿ ಬೆಳೆಯಲು, ಅವರು ತೆಪ್ಪಗಳನ್ನು ಕಟ್ಟಿ ನದಿಯ ದಂಡೆಗಳ ಹಳ್ಳಿಗಳಿಗೆ ಪ್ರವಾಸ ಮಾಡಿದರು. ಇವು ಅನಂತರ ಕಂಡುಬರುವ ನಾವೆ ಮತ್ತು ಹಡಗುಗಳ ಮೂಲವು.

ಮೊದಲಿನ ಜನರು ಭಾರಗಳನ್ನು ತಮ್ಮ ತಲೆಗಳ ಮೇಲಾಗಲಿ, ಇಲ್ಲವೆ ಎತ್ತುಗಳ ಮೇಲಾಗಲಿ ಸಾಗಿಸುತ್ತಿದ್ದರೆಂದು ತೋರುತ್ತದೆ.

## ೧. ನೈಲ ನದೀತೀರದ ಸಂಸ್ಕೃತಿ.

ನೈಲ ಮತ್ತು ಯುಫ್ರೆಟಿಸ್ ನದೀತೀರಪ್ರದೇಶಗಳು "ಮಾನವ ಸಂಸ್ಕೃತಿಯ (ನಾಗರಿಕತೆಯ) ತೊಟ್ಟಿಲುಗಳು" ಎಂದು ಹೇಳಲಾಗುತ್ತದೆ. ಈ ಪ್ರದೇಶಗಳಲ್ಲಿಯ ಸಂಸ್ಕೃತಿಯು ಏನಿಲ್ಲೆಂದರೂ ಐದಾರು ಸಾವಿರ ವರುಷಗಳಷ್ಟು ಹಳೆಯದೆಂದು ಬಲ್ಲವರು ಅಭಿಪ್ರಾಯಪಡುವರು.

ನೈಲ ನದಿಯು ಆಫ್ರಿಕಾಖಂಡದಲ್ಲಿಯ ಇಜಿಪ್ತ ದೇಶದಲ್ಲಿ ಹರಿದಿರುವದು. ಈ ನದಿಯೇ ಈಗಲೂ ಅಲ್ಲಿಯ ಜನರ ಜೀವನದ ಮುಖ್ಯ ಆಧಾರವಾಗಿರುವದು. ಈ ನದಿಯ ದಂಡೆಗುಂಟ ಸುಮಾರು ನಾಲ್ಕೈದು ಸಾವಿರ ವರುಷಗಳ ಹಿಂದೆ ಕಂಡುಬರುತ್ತಿದ್ದ ಸಂಸ್ಕೃತಿಯ ಕೆಲವು ಮುಖ್ಯ ವಿವರಗಳು ಕೆಳಗಿನಂತಿವೆ :—

( ನೈಲನದೀತೀರದ ಸಂಸ್ಕೃತಿಯೆಂದರೆ ಸಾಮಾನ್ಯವಾಗಿ ಇಜಿಪ್ತದ ಸಂಸ್ಕೃತಿಯೆಂದೇ ತಿಳಿಯಬಹುದು. )

ಪ್ರಾಚೀನ ಇಜಿಪ್ತದಲ್ಲಿ ಇಂದಿಗೆ ಸುಮಾರು ೫೩೫೦ ವರುಷಗಳ ಹಿಂದೆ "ಅರಸುಮನೆತನಗಳು" ಉದಯಿಸಿದವು. ಇವು[೧] ಮೂರು ಸಾವಿರ ವರುಷಗಳಿಗೆ ಮೇಲ್ಪಟ್ಟು[೨] ಇಜಿಪ್ತದ ಆಡಳಿತೆಯನ್ನು ಸಾಗಿಸಿದವು. ಇದಕ್ಕೂ ಮೊದಲು ಸಹ, ಇಜಿಪ್ತದಲ್ಲಿ ಕೆಲವು ಅರಸರು ಆಗಿಹೋದರು. ಮೆನಾ ( ಮೆನಾಸ್ ) ಎಂಬವನು ಅಲ್ಲಿಯ ಮೊದಲನೆಯ ಅರಸನು ( ಚಿತ್ರ ೨ ). ಅವನು ಜಗತ್ತಿನಲ್ಲಿಯೇ ಮೊದಲನೆಯ ಅರಸನೆಂದೂ ಹೇಳಲಾಗುತ್ತದೆ. ಆ ಅತಿಪ್ರಾಚೀನ ಕಾಲದಲ್ಲಿ ಕೂಡ, ಇಜಿಪ್ತದ ಜನರು ಅಷ್ಟೊಂದು ಅಸಭ್ಯ (ಕಾಡು) ಸ್ಥಿತಿಯಲ್ಲಿದ್ದಿಲ್ಲ. ಅಂಕಗಣಿತ, ಖಗೋಲಶಾಸ್ತ್ರ ಮತ್ತು ಕೈಗಾರಿಕೆಗಳು ಅವರಿಗೆ ತುಸುಮಟ್ಟಿಗೆ ಗೊತ್ತಿದ್ದವು. ಅರಸುಮನೆತನಗಳ ಆಳಿಕೆಯು ಪ್ರಾರಂಭವಾದ ಬಳಿಕ, ಮೂರನೆಯ ಮನೆತನದ ಅರಸರು

---

೧. ಮೂವತ್ತು ಇಜಿಪ್ತ ಅರಸುಮನೆತನಗಳು, ಒಂದು ಪಾರಸೀಕ ಅರಸುಮನೆತನ,

೨. ಕ್ರಿ. ಪೂ. ೩೪೦೦ ರಿಂದ ಕ್ರಿ. ಪೂ. ೩೩೨ ರ ವರೆಗೆ.

ಸಾಮ್ರಾಜ್ಯವಾಗಿ ಎಲ್ಲ ವಿಷಯಗಳಲ್ಲಿ ಇಜಿಪ್ತವು ಘನತೆಗೇರುವಂತೆ ಮಾಡಿದರು. **ಸ್ನೆಫರು** ಎಂಬ ಕೊನೆಯ ಅರಸನಂತೂ ವ್ಯಾಪಾರಾಭಿವೃದ್ಧಿ ಮತ್ತು ಕಡಲಕಾಳಗಗಳಿಗಾಗಿ ಸಣ್ಣ ದೊಡ್ಡ ಹಡಗುಗಳನ್ನು ಕಟ್ಟಿದನು ( ಚಿತ್ರ ೩ ನೋಡಿರಿ ). ಪರರ ದಾಳಿಗಳನ್ನು ಬಗ್ಗುಬಡಿದನಲ್ಲದೆ ತನ್ನ ರಾಜ್ಯವನ್ನು ವಿಸ್ತರಿಸಿದನು. ಮುಂದಿನ ಎರಡು ಮನೆತನಗಳಾದರೂ ಇದೇ ಮಾರ್ಗದಲ್ಲಿ ಸಾಗಿದವು. ಮತ್ತು "ಪಿರಮಿಡ್"[೩] ಗಳೆಂಬ ಭವ್ಯಾಕಾರದ ಕಟ್ಟಡಗಳನ್ನು ಕಟ್ಟಿ ಪ್ರಖ್ಯಾತಿಗೆ ಬಂದವು ( ಚಿತ್ರ ೪ ನೋಡಿರಿ ). ಮುಂದೆ ಕೆಲವು ಕಾಲ ಇಜಿಪ್ತದಲ್ಲಿ ಅರಾಜಕತೆ ನೆಲಸಿತು. ಆದರೆ ತನ್ನ ಕಳೆದುಹೋದ ವೈಭವವನ್ನು ಇಜಿಪ್ತವು ೧೨ನೆಯ ಮನೆತನದ ಆಳಿಕೆಯಲ್ಲಿ ಮರಳಿ ಗಳಿಸಿತು. ಅದೇ ಕಾಲದಲ್ಲಿ ನೈಲ ನದಿಯ ನೀರಿನಿಂದ ನೀರಾವರಿಯ ಯೋಜನೆಗಳಾಗಿ ದೇಶದ ಸಾಂಪತ್ತಿಕ ಸ್ಥಿತಿಯು ಬೆಳೆಯಿತು. ೧೮ನೆಯ ಮನೆತನದ ಆಳಿಕೆಯಂತೂ[೪] ಇಜಿಪ್ತದ ಸುವರ್ಣಕಾಲ ! ಆಗ ಇಜಿಪ್ತವು ಸಾಮ್ರಾಜ್ಯವೆಂದೆನಿಸಿತು. ವ್ಯಾಪಾರ, ಕಲೆ, ಸಂಸ್ಕೃತಿಗಳಲ್ಲಿ ಅದು ವೈಭವಶಿಖರವನ್ನು ಮುಟ್ಟಿತು. ಆದರೆ ಮುಂದೆ ಅದರ ಪ್ರಭಾವವು ಕುಗ್ಗುತ್ತ ನಡೆದು, ಕೊನೆಯ ಮನೆತನದ ಆಳಿಕೆಯಲ್ಲಿ ಅದು ಪಾರಸೀಕರ ಪ್ರಭಾವಕ್ಕೆ ಒಳಗಾಯಿತು. ಮುಂದೆ ಕೆಲವೇ[೫] ವರುಷಗಳಲ್ಲಿ ಮೆಸಿಡೋನದ ಅರಸನಾದ ಅಲೆಕ್ಝಾಂಡರನು ಅದನ್ನು ಪಾರಸೀಕರಿಂದ ಕಿತ್ತುಕೊಂಡನು.

**ಜನಜೀವನ :—**

ಜನರ ಮುಖ್ಯ ಉದ್ಯೋಗವು ಒಕ್ಕಲುತನವಾಗಿತ್ತು. ಅವರು ಗೋದಿ, ಜವೆಗೋದಿ ಮತ್ತು ವಟಾಣಿಯಂತಹ ದುಂಡು ಕಾಳುಗಳನ್ನು ಬೆಳೆದರು. ವ್ಯವಹಾರಗಳು ವಿನಿಮಯದಿಂದ ಸಾಗಿದವು. ಜನರಿಗೆ ಅಂಕಗಣಿತ, ಖಗೋಲಶಾಸ್ತ್ರಗಳ ಜ್ಞಾನವಿತ್ತು. ಅವರಿಗೆ ತಮ್ಮದೇ ಆದ ಒಂದು ವಿಶಿಷ್ಟ ಲಿಪಿ ಇತ್ತು. ಕಂಚು, ತಾಮ್ರ, ಬೆಳ್ಳಿ, ಬಂಗಾರ, ಕಬ್ಬಿಣಗಳು ಅವರಿಗೆ

೩. ಅರಸರಿಗಾಗಿ ಕಟ್ಟಿದ ಗೋರಿಗಳು ; ರಾಜಸಮಾಧಿಗಳು.

೪. ಕ್ರಿ. ಪೂ. ೧೫೮೦ ರಿಂದ ಕ್ರಿ. ಪೂ. ೧೩೭೫ರ ವರೆಗೆ.

೫. ಕ್ರಿ. ಪೂ. ೩೩೨ರಲ್ಲಿ.

ಬಹುಕಾಲದಿಂದಲೂ ಗೊತ್ತಿದ್ದವು. ಮನೆಗಳು ಇಟ್ಟಿಗೆಗಳಿಂದ ಅಚ್ಚುಕಟ್ಟಾಗಿ ತಯಾರಾದವು. ಅಲ್ಲಿಯ 'ಗುಡಿ' ಗಳು ಜಗತ್ತಿನಲ್ಲಿಯೇ ಮಿಗಿಲಾದ ಭವ್ಯ ಕಟ್ಟಡಗಳಾಗಿದ್ದವು.

ಸಮಾಜದಲ್ಲಿ 'ಪುರೋಹಿತ'ನಿಗೆ ಮಹತ್ವದ ಸ್ಥಾನ-ಮಾನಗಳಿದ್ದವು. ಅವನು ದೇವರ ಅವತಾರವೆಂದು ಜನರು ಭಾವಿಸಿದರು.

ಅರಸನನ್ನು 'ಫೆರೋ'ಯೆಂದು ಕರೆದು ಅವನು ದೇವಾಂಶನೆಂದು ನಂಬಿದರು.

ಮೊದಮೊದಲು ಇಜಿಪ್ತದ ಜನರು ಅಸಂಖ್ಯಾತ ದೇವತೆಗಳನ್ನು ಪೂಜಿಸುತ್ತಿದ್ದರು. ದೇವತೆಗಳಿಗೆ ನರಬಲಿಯನ್ನು ಕೊಡುತ್ತಿದ್ದರು. ಆದರೆ ಮುಂದೆ 'ಎಮೆನ್' ಎಂಬ ಅವರ ಅರಸನು ಸೂರ್ಯನೇ ಮುಖ್ಯ ದೇವರೆಂದು ಸಾರಿ, ಉಳಿದೆಲ್ಲ ದೇವತೆಗಳನ್ನು ಅಲ್ಲಗಳೆದನು.

ಜಗತ್ತಿನಲ್ಲಿಯ ಮೊದಲನೆಯ ಅಕ್ಷರ-ಲಿಪಿ, ಮೊದಲನೆಯ ಕಾನೂನು ಸಂಗ್ರಹ, ಸಂಗೀತ ಸಾಹಿತ್ಯಗಳು ಇಜಿಪ್ತದ ಜನರಲ್ಲಿಯೇ ಕಂಡುಬಂದವೆಂದು ಹೇಳಲಾಗುತ್ತದೆ.

## ೨. ಯುಫ್ರೆಟಿಸ ನದೀತೀರದ ಸಂಸ್ಕೃತಿ :—

ಈ ನದಿಯು ಏಶಿಯಾದಲ್ಲಿಯ ತುರ್ಕಸ್ತಾನದಲ್ಲಿ ಹರಿದಿದೆ. ಈ ನದಿಯ ಮತ್ತು ಅಲ್ಲಿಯ ಟೈಗ್ರಿಸ ಎಂಬ ಬೇರೊಂದು ನದಿಯ ನಡುವಿನ ಪ್ರದೇಶಕ್ಕೆ ಸಾಮಾನ್ಯವಾಗಿ ಮೆಸೊಪೊಟೇಮಿಯ ದೇಶವೆಂದು ಕರೆಯುತ್ತಾರೆ. ಆದ್ದರಿಂದ ಯುಫ್ರೆಟಿಸ ನದೀತೀರದ ಸಂಸ್ಕೃತಿಯೆಂದರೆ ಮೆಸೊಪೊಟೇಮಿಯದ ಸಂಸ್ಕೃತಿಯೆಂದು ತಿಳಿಯಲು ಅಡ್ಡಿಯಿಲ್ಲ. ಇಲ್ಲಿ ಪ್ರಾಚೀನ ಕಾಲದಲ್ಲಿ 'ಸುಮೇರಿಯನ' ಎಂಬ ಜನರು ವಾಸವಾಗಿದ್ದರು.

ಅವರ ಮೈಬಣ್ಣ ಕಂದು. ಎದ್ದುಕಾಣುವ ಮೂಗುಳ್ಳವರು. ಬಿಸಿಲಿನಲ್ಲಿ ಒಣಗಿಸಿದ ಇಟ್ಟಿಗೆಗಳಿಂದ ಅವರು ತಮ್ಮ ಮನೆಗಳನ್ನು ಮತ್ತು ಗುಡಿ ಗೋಪುರಗಳನ್ನು ಕಟ್ಟಿದರು. ಅವರ ಸಾಕುಪ್ರಾಣಿಗಳೆಂದರೆ— ದನ, ಕುರಿ, ಆಡು, ಕತ್ತೆಗಳು. ಅವರಲ್ಲಿ ಕುದುರೆಗಳಿರಲಿಲ್ಲ. ಅವರು ಉಣ್ಣೆಯ ಉಡುಪನ್ನು

ಧರಿಸುತ್ತಿದ್ದರು. ಯುದ್ಧಗಳಲ್ಲಿ ಈಟಿಗಳನ್ನೂ ತೊಗಲಿನ ಢಾಲುಗಳನ್ನೂ ಉಪಯೋಗಿಸುತ್ತಿದ್ದರು.

ಸುಮೇರಿಯನರು ಪಟ್ಟಣಗಳನ್ನು ಕಟ್ಟಿದರು. ನೀರಾವರಿಗಾಗಿ ಕೆರೆ-ಕಾಲುವೆಗಳನ್ನು ತಯಾರಿಸಿದರು. ಪ್ರತಿಯೊಂದು ಪಟ್ಟಣವು ಒಂದು ಸ್ವತಂತ್ರ ರಾಜ್ಯವಾಗಿತ್ತು. ಪ್ರತಿಯೊಂದಕ್ಕೂ ಪ್ರತ್ಯೇಕ ದೇವತೆ, ಪ್ರತ್ಯೇಕ ಪುರೋಹಿತ-ವರ್ಗ ಮತ್ತು ಪ್ರತ್ಯೇಕ ಕಾನೂನುಗಳು. ಇಜಿಪ್ತದ ಜನರಂತೆ ಇವರಿಗಾದರೂ ತಾಮ್ರ, ಬೆಳ್ಳಿ, ಬಂಗಾರ, ಕಬ್ಬಿಣಗಳು ಬಹುಕಾಲದಿಂದ ಗೊತ್ತಿದ್ದವು. ಜೊತೆಗೆ ಕಂಚಿನ ಉಪಯೋಗವೂ ಗೊತ್ತಿತ್ತು. ಅವರದಾದರೂ ಒಂದು ವಿಶಿಷ್ಟವಾದ ಲಿಪಿ ಇತ್ತು.

**ಜನಜೀವನ :—**

ಕೈಗಾರಿಕೆಯು ಜನರ ಮುಖ್ಯ ದಿನಚರಿಯಾಗಿತ್ತು. ಅದು ಒಳ್ಳೇ ಮೇಲ್ಮಟ್ಟಕ್ಕೆ ಮುಟ್ಟಿತ್ತು. ಹಸ್ತಿದಂತದ ಕೆಲಸ, ಮಣ್ಣು, ಶಿಲೆ ಮತ್ತು ಲೋಹಗಳಿಂದ ತಯಾರಿಸಿದ ಪಾತ್ರೆಗಳು ಮತ್ತು ಕಾಜಿನ ಮಣಿಗಳು ಅದರ ಕೈಗಾರಿಕೆಯ ಉದಾಹರಣೆಗಳಾಗಿ ದೊರೆತಿವೆ. ಅವರ ಅಂದಿನ ಚಿತ್ರಕಲೆಯು ಇಂದಿಗೂ ಜನರ ಮನಸ್ಸನ್ನು ಸೆಳೆಯುತ್ತದೆ. ಹೆಂಗಸರಿಗೆ ರಾಜ್ಯದಾಡಳಿತೆಯಲ್ಲಿ ಭಾಗ ವಹಿಸಲು ಮತ್ತು ಸಾರ್ವಜನಿಕ ಕಾರ್ಯಗಳಲ್ಲಿ ತೊಡಗಲು ಅನುಕೂಲತೆಗಳಿದ್ದವು. ಈ ಜನರು ಕ್ರೂರ ದೇವತೆಗಳ ಮತ್ತು ದೆವ್ವ ರಾಕ್ಷಸಗಳ ಕಾಡಾಟದಲ್ಲಿ ನಂಬಿಕೆಯುಳ್ಳವರಿದ್ದರು. ಹೆಣಗಳನ್ನು ಹುಗಿಯುವ ಪರಿಪಾಠವು ಇವರಲ್ಲಿತ್ತು. ಗುರುತಿಗಾಗಿ ಗೋರಿಗಳನ್ನು ಕಟ್ಟಿದ ಉದಾಹರಣೆಗಳಿವೆ.

**೩. ಹೊ–ಆಂಗ–ಹೊ ನದೀತೀರದ ಸಂಸ್ಕೃತಿ:—**

ಈ ನದಿಯು ಚೀನದೇಶದಲ್ಲಿ ಹರಿದಿರುವ ಒಂದು ದೊಡ್ಡ ನದಿ. ಆದ್ದರಿಂದ ಈ ನದೀತೀರದ ಸಂಸ್ಕೃತಿಯೆಂದರೆ ಸಾಮಾನ್ಯವಾಗಿ ಚೀನದೇಶದ ಸಂಸ್ಕೃತಿಯೆಂದೇ ಹೇಳಬಹುದು. ಚೀನದ ಸಂಸ್ಕೃತಿಯಾದರೂ ಅತಿಪ್ರಾಚೀನವಾದುದೆಂದು ಹೇಳುವ ರೂಢಿಯುಂಟು. ಇಂದಿಗೆ ಸುಮಾರು ೩೭೬೦

ವರುಷಗಳ ಪೂರ್ವದಲ್ಲಿ ಚೀನವು ತನ್ನಲ್ಲಿಯೆ ಅನೇಕ ಚಿಕ್ಕ–ಪುಟ್ಟ ರಾಜ್ಯಗಳುಳ್ಳ ಒಂದು ದೊಡ್ಡ ರಾಜ್ಯವಾಗಿತ್ತು. ಸಾಮಾನ್ಯವಾಗಿ ಪ್ರತಿಯೊಂದು ಪಟ್ಟಣಕ್ಕೂ ಒಬ್ಬ ರಾಜನಿದ್ದ ನಂತೆ! ಇಂತಹ ರಾಜರು ಇಡೀ ಚೀನದ ರಾಜನನ್ನು ತಮ್ಮ ಮಹಾರಾಜನೆಂದು ಒಪ್ಪಿಕೊಂಡು ತಮಗೆ ಬೇಕಾದಾಗ ಮಾತ್ರ ಅವನಿಗೆ ಕಪ್ಪಗಳನ್ನು ಸಲ್ಲಿಸುತ್ತಿದ್ದರು.

ಚೀನದ ಪ್ರಾಚೀನ ಅರಸುಮನೆತನಗಳಲ್ಲಿ ‘ಶಾಂಗ’ ಮನೆತನವು ಮೊದಲನೆಯದು. ಇದರ ಅನಂತರ ಕ್ರಿ. ಪೂ. ೧೨ನೆಯ ಶತಮಾನದಲ್ಲಿ ‘ಚೌ’ ಎಂಬ ಬೇರೊಂದು ಮನೆತನವು ಆಳತೊಡಗಿತು. ಈ ಕಾಲಾವಧಿಯಲ್ಲಿ ಚೀನದಲ್ಲಿ ಕೆಲವು ಪ್ರಸಿದ್ಧ ತತ್ತ್ವಜ್ಞಾನಿಗಳೂ ಧರ್ಮಬೋಧಕರೂ ಆಗಿಹೋದರು. ಮುಂದೆ ಕ್ರಿ. ಪೂ. ಮೂರನೆಯ ಶತಮಾನದಲ್ಲಿ ‘ಶಿನ್’ ಎಂಬ ಮೂರನೆಯ ಮನೆತನವೊಂದು ರಾಜ್ಯಸೂತ್ರ ವಹಿಸಿತು. ಈ ಮನೆತನದ ‘ಶಿ–ಹ್ವಾಂಗ–ಟಿ’ ಎಂಬ ರಾಜನು ಮಧ್ಯ ಏಶಿಯದಿಂದ ಬಹುಕಾಲದಿಂದಲೂ ಸಾಗಿಬರುತ್ತಿದ್ದ ಅಸಭ್ಯ ದಾಳಿಗಾರರನ್ನು ತಡೆಹಿಡಿದನು. ಇದಲ್ಲದೆ, ಮುಂದೆ ಎಂದೂ ದಾಳಿಗಳಾಗಬಾರದೆಂದು ಚೀನದಲ್ಲಿ ಅತಿ ದೊಡ್ಡ ಗೋಡೆಯನ್ನು ಕಟ್ಟಿದನು ( ಚಿತ್ರ ೫ ನೋಡಿರಿ ). ಇದರ ಉದ್ದಳತೆಯು ೧೨೦೦ ಮೈಲು. ಅನಂತರ, ಚೀನದ ಅರಸೊತ್ತಿಗೆಯು ‘ಹಾನ’ ಎಂಬ ಮತ್ತೊಂದು ಮನೆತನದ ಕೈ ಸೇರಿತು. ಈ ಮನೆತನದ ಅರಸರ ಕಾಲದಲ್ಲಿ ಚೀನದ ಸಂಸ್ಕೃತಿಯು ಭರದಿಂದ ಬೆಳೆಯಿತು. ಸಂಪತ್ತು ಹೆಚ್ಚಿತು. ಕಲೆಗಳು ಅಭಿವೃದ್ಧಿಗೊಂಡವು. ಇವರ ಶಾಸನ ಪದ್ಧತಿಯು ಜಗತ್ತಿನಲ್ಲಿಯೇ ಮಿಗಿಲಾಗಿತ್ತಂತೆ! ಈ ಮನೆತನದ ಆಡಳಿತೆಯು ಕ್ರಿ. ಶ. ಮೂರನೆಯ ಶತಮಾನದಲ್ಲಿ ಸಮಾಪ್ತಿ ಹೊಂದಿತು.

**ಜನಜೀವನ :—**

ಆಗಿನ ಚೀನದಲ್ಲಿಯ ಜನರ ಸಂಸ್ಕೃತಿಯು ಅದೇ ಕಾಲದ ಇಜಿಪ್ತ ಮತ್ತು ಮೆಸೊಪೊಟೇಮಿಯಗಳಲ್ಲಿಯ ಜನರ ಸಂಸ್ಕೃತಿಯಂತೆಯೇ ಇತ್ತು. ದೇವಾಲಯಗಳಲ್ಲಿ ಅವರ ಪುರೋಹಿತರು ಹಾಗೂ ಪುರೋಹಿತ-ಅರಸರು ಋತುಮಾನಗಳಿಗೆ ತಕ್ಕಂತೆ ತಮ್ಮ ದೇವತೆಗಳಿಗೆ ನರಬಲಿ ಕೊಡುತ್ತಿದ್ದರು.

ಆದರೆ ಬರಬರುತ್ತ ಈ ನರಬಲಿಗಳು ನಿಂತುಹೋಗಿ ಪಶುಬಲಿಗಳು ರೂಢಿಯಲ್ಲಿ ಬಂದವು. ಕ್ರಿ. ಪೂ. ೧೦೦೦ ವರುಷಗಳ ಮೊದಲೆ ಚೀನದಲ್ಲಿ ಚಿತ್ರಬರಹವು ಬೆಳವಣಿಗೆ ಹೊಂದುತ್ತಲಿತ್ತು.

## ೪. ಸಿಂಧುನದೀ ತೀರದ ಸಂಸ್ಕೃತಿ :—

ಈ ನದಿಯು ಪಂಜಾಬ ಮತ್ತು ಸಿಂಧ ಪ್ರಾಂತಗಳಲ್ಲಿ ಹರಿದಿದೆ. ಪಂಜಾಬ ಪ್ರಾಂತದ ಹರಪ್ಪಾ[1] ಎಂಬಲ್ಲಿ ಮತ್ತು ಸಿಂಧಪ್ರಾಂತದ ಮೊಹೆಂಜೊದಾರೊ[2] ಎಂಬಲ್ಲಿ ಭೂಗತವಾಗಿದ್ದ ಪುರಾತನ ನಗರಗಳು ಬೆಳಕಿಗೆ ಬಂದಿವೆ. ಮೊಹೆಂಜೊದಾರೊದಲ್ಲಿ ಒಂದರಮೇಲೊಂದರಂತೆ ಮೂರು ಪಟ್ಟಣಗಳಿದ್ದುದು ಕಂಡುಬಂದಿದೆ. ಇಲ್ಲಿಯ ಸಂಸ್ಕೃತಿಯು ಇಂದಿಗೆ ೫೦೦೦ ವರುಷಗಳ ಹಿಂದಿನದೆಂದು ಬಲ್ಲವರ ಅಭಿಪ್ರಾಯ. ಮೊಹೆಂಜೊದಾರೊ ಪಟ್ಟಣವು ಬಹು ದೊಡ್ಡ ವ್ಯಾಪಾರ ಸ್ಥಳವಾಗಿತ್ತೆಂದೂ ಅಲ್ಲಿ ಬೇರೆ ಬೇರೆ ದೇಶಗಳ ಜನರು ವಾಸಿಸುತ್ತಿದ್ದರೆಂದೂ ಅವರು ಅಭಿಪ್ರಾಯಪಡುವರು. ಎರಡೂ ಸ್ಥಳಗಳಲ್ಲಿಯ ಅವಶೇಷಗಳ ಸಹಾಯದಿಂದ ಕೆಳಗಿನ ಸಂಗತಿಗಳನ್ನು ನಿರ್ಧಾರವಾಗಿ ಹೇಳಬರುವಂತಿದೆ:

ಪಟ್ಟಣಗಳಲ್ಲಿ ಅಗಲವಾದ ಪೇಟೆಯ ಸಾಲುಗಳೂ ಜನವಸತಿಯ ಬೀದಿಗಳೂ ಇದ್ದವು. ಸಾರ್ವಜನಿಕ ರಸ್ತೆಗಳಿಗೆ ರಾತ್ರಿಯಲ್ಲಿ ದೀಪ ಹಚ್ಚುವ ವ್ಯವಸ್ಥೆಯಿತ್ತು. ಪ್ರತಿಯೊಂದು ಬೀದಿಯಲ್ಲಿ ಕಸವನ್ನು ಒಟ್ಟುಗೂಡಿಸಲು ಯೋಜನೆ ಮಾಡಲಾಗಿತ್ತು. ಪಟ್ಟಣಗಳ ರಚನೆಯು ಉತ್ತಮವಿತ್ತು. ಅವುಗಳಲ್ಲಿಯ ಇಟ್ಟಿಗೆಯ, ಮನೆಗಳು, ದೇವಾಲಯಗಳು ಮತ್ತು ಎರಡೂ ಮಗ್ಗಲಿಗೆ ಗಟಾರಗಳುಳ್ಳ ರಸ್ತೆಗಳು ಬೆಳಕಿಗೆ ಬಂದಿವೆ.

ಶ್ರೀಮಂತರ ಮನೆಗಳನ್ನು ಮತ್ತು ಸಾರ್ವಜನಿಕ ಸ್ನಾನದ ಸ್ಥಳಗಳನ್ನು ಗುರುತಿಸಲಾಗಿದೆ (ಚಿತ್ರ ೬ ನೋಡಿರಿ). ಜನರ ಉಪಯೋಗಕ್ಕಾಗಿ ದೊಡ್ಡ ಪ್ರಮಾಣದ ಮೇಲೆ ನೀರನ್ನು ಸಂಗ್ರಹಿಸಿಡುವ

---

೧. ಮೊಂಟಗಮರಿ ಜಿಲ್ಹೆಯಲ್ಲಿ ರಾವೀನದಿಯಿಂದ ೬ ಮೈಲು ದೂರದಲ್ಲಿ.

೨. ಇದು ಸಿಂಧಿ ಭಾಷೆಯ ಶಬ್ದ. ಮೃತರ ಪಟ್ಟಣವೆಂದು ಇದರ ಅರ್ಥ. ಲಾರ್ಕಾನಾ ಜಿಲ್ಹೆಯಲ್ಲಿ ಸಿಂಧು ನದಿಯಿಂದ ಮೂರೂವರೆ ಮೈಲು ದೂರದಲ್ಲಿ.

ಯೋಜನೆಯೂ ಇತ್ತು. ಬಹು ಅಚ್ಚುಕಟ್ಟಾಗಿ ಕಟ್ಟಿದ ಓಣಿ, ಬಾಂವಿ, ಕಾಲುವೆಗಳಿದ್ದವು. ನದಿಗೆ ಅಣೆಕಟ್ಟುಗಳನ್ನು ಕಟ್ಟಲಾಗಿತ್ತು. ಗೋದಿ, ಜವೆಗೋದಿ ಮುಂತಾದ ಧಾನ್ಯಗಳು ಮತ್ತು ಹಣ್ಣುಹಂಪಲ, ಕಾಯಿ-ಪಲ್ಯ ಬೆಳೆಯುತ್ತಿದ್ದವು. ಮಣ್ಣಿನಿಂದ ಸುಂದರ ಪಾತ್ರೆಗಳನ್ನು ಮಾಡಿ ಅವುಗಳ ಮೇಲೆ ಚಿತ್ರ ಕೊರೆಯುತ್ತಿದ್ದರು.

**ಜನಜೀವನ:—**

ಜನರು ಆಹಾರಕ್ಕಾಗಿ ಗೋದಿ, ಜವೆಗೋದಿಗಳನ್ನು ಉಪಯೋಗಿಸಿದರು. ತುಸುಮಟ್ಟಿಗೆ ಅಕ್ಕಿಯನ್ನೂ ಉಪಯೋಗಿಸಿರಬಹುದು. ಕಾಯಿ-ಪಲ್ಯ, ಹಣ್ಣು, ಹಾಲು, ತುಪ್ಪ ಮೊದಲಾದವೂ ಅವರ ನಿತ್ಯದ ಆಹಾರ ಜೀನಸುಗಳಾಗಿದ್ದವು. ಮಾಂಸವನ್ನೂ ಸೇವಿಸುತ್ತಿದ್ದರು. ಆಚ್ಛಾದನಕ್ಕಾಗಿ ನೂಲಿನಿಂದ ತಯಾರಿಸಿದ ಬಟ್ಟೆಗಳನ್ನು ಬಳಸಿದರು. ಆಕಳು, ಎತ್ತು, ಎಮ್ಮೆ, ಕುರಿ, ನಾಯಿ, ಆನೆ, ಒಂಟೆಗಳು ಇವರು ಸಾಕಿದ ಪ್ರಾಣಿಗಳು. ಚಿನ್ನ, ಬೆಳ್ಳಿ, ಹಸ್ತಿದಂತಗಳ ಆಭರಣಗಳು ಸಿರಿವಂತರ ಮೈಮೇಲೆ ಕಂಡುಬರುತ್ತಿದ್ದವು. ಬಡವರ ಆಭರಣಗಳು ತಾಮ್ರ, ಸೀಸ ಮುಂತಾದವುಗಳವು. ಹೆಂಗಸರು ಕೈಗೆ ಕಂಕಣ, ತೋಳುಬಂದಿಗಳನ್ನೂ ಕೊರಳಿಗೆ ಸರಗಳನ್ನೂ ತಲೆಗೆ ವಿವಿಧ ಶಿರೋಭೂಷಣಗಳನ್ನೂ ಕಿವಿಗೆ ಕುಂಡಲಗಳನ್ನೂ ಧರಿಸುತ್ತಿದ್ದರು ( ಚಿತ್ರ ೭ ನೋಡಿರಿ ).

ಜನರು ಶಕ್ತಿ, ಲಿಂಗ, ವೃಷಭ ಮತ್ತು ಮೂರು ತಲೆಗಳದೊಂದು ದೇವತೆಯನ್ನು ಪೂಜಿಸಿದರು. ಗಿಡಗಳ ಪೂಜೆಯೂ ನಾಗಪೂಜೆಯೂ ರೂಢಿಯಲ್ಲಿದ್ದವು. ಸರಕಾರದ ಮುದ್ರೆಯ ಮೇಲೆ ಒಂದು ತರದ ನಂದಿಯ ಚಿತ್ರವಿತ್ತು ( ಚಿತ್ರ ೮ ನೋಡಿರಿ ). ಇವರು ಹೆಣಗಳನ್ನು ಪೆಟ್ಟಗೆಗಳಲ್ಲಿಟ್ಟು ಹುಗಿಯುತ್ತಿದ್ದರು. ಈ ಸಂಸ್ಕೃತಿಯು ಭಾರತದ ಮೂಲನಿವಾಸಿಗಳದು. ಅವರಿಗೆ "ದ್ರಾವಿಡ" ರೆಂದು ಕರೆಯಲಾಗುತ್ತದೆ. ಇದು ಕ್ರಿ. ಪೂ. ೪೦೦೦ ದಿಂದ ಕ್ರಿ. ಪೂ. ೨೦೦೦ ವರುಷಗಳ ವರೆಗೆ ಹಬ್ಬಿತ್ತು.

**ಗಂಗಾ ನದೀತೀರದ ಸಂಸ್ಕೃತಿ೮ :—**

ಗಂಗಾನದಿಯು ಹಿಂದುಗಳಿಗೆ ಪವಿತ್ರವೆನಿಸಿದ ನದಿ. ಇದು ಹಿಮಾಲಯ ಪರ್ವತವಲ್ಲಿ ಹುಟ್ಟಿ ಉತ್ತರಭಾರತದ ಭಾಗಗಳಲ್ಲಿ ಹರಿದು ಬಂಗಾಲ ಉಪಸಾಗರವನ್ನು ಕೂಡುತ್ತದೆ. ಇದರ ದಂಡೆಗುಂಟ ಯಾತ್ರಾಸ್ಥಳಗಳೆನಿಸಿದ ಪ್ರಯಾಗ, ಕಾಶಿ ಮುಂತಾದ ಪವಿತ್ರ ಪಟ್ಟಣಗಳಿರುವವು. ಈ ಪ್ರದೇಶದಲ್ಲಿ ನಮ್ಮ ಇತಿಹಾಸಪ್ರಸಿದ್ಧವಾದ ಆರ್ಯ ಸಂಸ್ಕೃತಿಯು ಬಹು ಕಾಲದ ಹಿಂದೆಯೇ ಹಬ್ಬಿ೯ ಬೆಳೆಯಿತು. ಆರ್ಯರು ಮೊದಲು ಭಾರತದ ಪಂಜಾಬ ಪ್ರಾಂತದಲ್ಲಿ ಕಾಲೂರಿದರು. ಅಲ್ಲಿಯ ನದಿಗಳ ದಂಡೆಗುಂಟ ವಾಸಿಸಿ, ಬರಬರುತ್ತ ಗಂಗಾನದಿಯ ತೀರಪ್ರದೇಶವನ್ನು ಸೇರಿದರು. ಆಗ ಆ ಪ್ರದೇಶಕ್ಕೆ ಮಧ್ಯಪ್ರದೇಶವೆಂದು ಕರೆಯಲಾಗುತ್ತಿತ್ತು. ಅಲ್ಲಿಂದ ಆ ನದಿಯ ದಂಡೆಗುಂಟ ಮುಂದುವರೆದರು. ಆರ್ಯರು ಸೃಷ್ಟಿಪೂಜಕರು. ಸೃಷ್ಟಿಯಲ್ಲಿಯ ಸೂರ್ಯ, ವಾಯು, ವರುಣ ಮುಂತಾದವರು ಇವರ ಮುಖ್ಯ ದೇವತೆಗಳು. ಆರ್ಯರು ಅವರಿಗಾಗಿ ಪ್ರಾರ್ಥನೆಗಳನ್ನು ರಚಿಸಿದರು. ಯಜ್ಞ-ಯಾಗಾದಿಗಳನ್ನು ಮಾಡಹತ್ತಿದರು. ಯಜ್ಞದಲ್ಲಿಯ ಆಹುತಿಗಳನ್ನು ಬೇರೆ ಬೇರೆ ದೇವತೆಗಳಿಗೆ ಸಲ್ಲಿಸಲು ಅಗ್ನಿದೇವತೆಯ ಕಲ್ಪನೆಯಾಯಿತು. ಕಾಲವು ಕಳೆದಂತೆ, ತಪೋವನಗಳು ಇಲ್ಲಿಯೆ ಮೊದಲು ತಲೆಯೆತ್ತಿದವು. ತಪೋವನಗಳೆಂದರೆ ಋಷಿಗಳು ವಾಸಿಸುತ್ತಿದ್ದ ಪ್ರದೇಶಗಳು; ಅವರು ತಪಸ್ಸು ಮಾಡುತ್ತಿದ್ದ ಸ್ಥಳಗಳು (ಚಿತ್ರ ೯ ನೋಡಿರಿ).

ಶ್ರೀರಾಮಚಂದ್ರನ ಕಾಲದಿಂದಲೂ ಗಂಗಾನದಿಯ ಮೇಲೆ ಪ್ರವಾಸ ಮಾಡುತ್ತಿದ್ದ ಸಂಗತಿಯು ನಮಗೆ ಪುರಾಣಗಳಿಂದ ತಿಳಿದುಬರುತ್ತದೆ.

ಈ ಪ್ರದೇಶದಲ್ಲಿ ಮಗಧವೆಂಬ ರಾಜ್ಯವು ಕ್ರಿ. ಪೂ. ಎಷ್ಟೋ ಶತಮಾನಗಳ ಹಿಂದೆಯೆ ಪ್ರಸಿದ್ಧಿಗೆ ಬಂದಿತ್ತು. ಆರ್ಯರಿಗೂ ಮೊದಲು, ಮಗಧವು 'ಕೀಕಟ' ರೆಂಬ ಅನಾರ್ಯರ ವಾಸಸ್ಥಾನವಾಗಿತ್ತು. ಅವರಲ್ಲಿ ಲೆಕ್ಕವಿಲ್ಲ

೮ ಆರ್ಯರು ಇಲ್ಲಿಗೆ ಬರುವ ಪೂರ್ವದಲ್ಲಿ ಇಲ್ಲಿದ್ದ ಸಂಸ್ಕೃತಿಯ ವಿಶೇಷ ವಿವರಗಳು ತಿಳಿದುಬಂದಿಲ್ಲ.

೯. ಕ್ರಿ. ಪೂ. ೨೦೦೦ ವರುಷಗಳ ಮೊದಲೆ.

ದಷ್ಟು ಗೋಸವೂಹವಿತ್ತು. ಇದಕ್ಕಾಗಿ ಅವರು ಹೆಸರಾಗಿದ್ದರು. ವೇದ ಕಾಲದಲ್ಲಿ ಮಗಧವು ಅನಾಗರಿಕ ತಂಡಗಳ ಎಷ್ಟೋ ಪ್ರಬಲ ಮುಖಂಡರಿಂದ ತುಂಬಿತ್ತು.

## ಅಭ್ಯಸನಗಳು.

೧. ಈ ಪ್ರಕರಣದಲ್ಲಿ ನೀವು ಓದಿರುವ ನದಿಗಳ ಹೆಸರುಗಳನ್ನು ಬರೆಯಿರಿ.

೨. 'ಗಂಗಾನದಿಯ ದಂಡೆಯಲ್ಲಿಯ ತಪೋವನ' ಚಿತ್ರದಲ್ಲಿ ನಿಮಗೆ ಕಂಡುಬರುವ ಸಂಗತಿಗಳನ್ನು ನಿಮ್ಮ ಸ್ವಂತ ಮಾತುಗಳಲ್ಲಿ ಹೇಳಿರಿ.

೩. ಕೆಳಗೆ ಕೊಟ್ಟ ವಾಕ್ಯಗಳಲ್ಲಿ ತೆರವು ಬಿಟ್ಟಿರುವ ಸ್ಥಳಗಳನ್ನು ಯೋಗ್ಯ ಶಬ್ದಗಳಿಂದ ತುಂಬಿರಿ.

(ಅ) ನೈಲ ನದಿಯು...........ದೇಶದಲ್ಲಿ ಹರಿದಿರುವದು.

(ಆ) ...........ಎಂಬಾತನು ಜಗತ್ತಿನಲ್ಲಿ ಮೊದಲನೇ ಅರಸನೆಂದು ಹೇಳಿಕೆಯಿದೆ.

(ಇ) ಯುಫ್ರೆಟಿಸ್ ನದೀತೀರದ ಜನರ ಮುಖ್ಯ ದಿನಚರಿಯು ........ಇತ್ತು.

(ಈ) ಚೀನದ ದೊಡ್ಡ ಗೋಡೆಯ ಉದ್ದಳತೆಯು...........ಮೈಲು.

(ಉ) ಮೊಹೆಂಜೊದಾರೋದ ಸಂಸ್ಕೃತಿಯು...........ವರುಷಗಳ ಹಿಂದಿನದೆಂದು ತಿಳಿಯಲಾಗುತ್ತಿದೆ.

(ಊ) ...........ಹಿಂದುಗಳಿಗೆ ಪವಿತ್ರವಾದ ನದಿ.

# ೩ನೆಯ ಪ್ರಕರಣ




ಚಿತ್ರ ೧. ಪ್ರಾಚೀನ ಭಾರತದಲ್ಲಿ ಆರ್ಯರ ಪ್ರಸಾರ



ಚಿತ್ರ ೨. ವೇದಕಾಲದ ಸ್ತ್ರೀ.



ಚಿತ್ರ ೩. ಆರ್ಯರ ಯುದ್ಧಾಯುಧಗಳು.

## ೩ನೆಯ ಪ್ರಕರಣ

---

# ಭಾರತದಲ್ಲಿ ಆರ್ಯರು

ಬಾಲಕರೇ, ಹಿಂದಿನ ಪ್ರಕರಣದಲ್ಲಿ ಗಂಗಾನದೀತೀರದ ಸಂಸ್ಕೃತಿಯ ಬಗೆಗೆ ಹೇಳುವಾಗ, ಅದು ಆರ್ಯರ ಸಂಸ್ಕೃತಿಯೆಂದು ಹೇಳಲಾಗಿದೆ. ಆದರೆ ಈ ಆರ್ಯರೆಂಬವರು ಯಾರು? ಅವರು ಭಾರತಕ್ಕೆ ಎಲ್ಲಿಂದ ಮತ್ತು ಯಾವಾಗ ಬಂದರು? ಅವರ ಸಂಸ್ಕೃತಿಯ ವಿವರಗಳೇನು? ಇವೇ ಮೊದಲಾದ ಪ್ರಶ್ನೆಗಳಿಗೆ ಕೆಲವು ವಿವರಗಳು ಕೆಳಗಿನಂತಿವೆ:—

**ಆರ್ಯರು ಯಾರು?**

ಕ್ರಿ. ಪೂ. ಸುಮಾರು ೨೫೦೦ ವರುಷಗಳ ಹಿಂದೆ ಮಧ್ಯ ಹಾಗೂ ಆಗ್ನೇಯ ಯುರೋಪ ಮತ್ತು ಮಧ್ಯಏಶಿಯಗಳಲ್ಲಿ ಬಿಳಿ ಮೈಬಣ್ಣದ ಕೆಲವು ಮಾನವ ಕುಲಗಳು ವಾಸಿಸಿದ್ದವು. ಪಶುಪಾಲನೆ ಮತ್ತು ತುಸುಮಟ್ಟಿಗೆ ಒಕ್ಕಲುತನ ಇವು ಆ ಜನರ ಉಪಜೀವನದ ಮಾರ್ಗಗಳಾಗಿದ್ದವು. ಒಕ್ಕಲುತನ ಗೊತ್ತಿತ್ತೆಂಡೇ ಅವರು ಆರ್ಯರೆಂದು ಹೆಸರಾದರು. ಏಕೆಂದರೆ ಆರ್ಯರೆಂದರೆ ಒಕ್ಕಲುತನ ಬಲ್ಲವರೆಂದೂ ಶ್ರೇಷ್ಠರೆಂದೂ ಅರ್ಥ. ಆದರೆ ಒಕ್ಕಲುತನಕ್ಕಾಗಿ ಅವರು ಎಲ್ಲಿಯೂ ಶಾಶ್ವತವಾಗಿ ನೆಲಸಲಿಲ್ಲ. ಪ್ರದೇಶದಿಂದ ಪ್ರದೇಶಕ್ಕೆ ಅಲೆದಾಡುವದು ಆರ್ಯರ ಜೀವನದ ಮುಖ್ಯ ಲಕ್ಷಣವಾಯಿತು. ಅವರಲ್ಲಿ ಬರಬರುತ್ತ ಪಂಗಡಗಳುಂಟಾದವು. ಒಂದು ಪಂಗಡವು ವಾಯುವ್ಯ ಮಾರ್ಗದಿಂದ ಭಾರತದಲ್ಲಿ ಕಾಲಿಟ್ಟಿತು. [೧]

**ಆರ್ಯರ ಆಗಮನ:—**

ಆರ್ಯರು ಭಾರತಕ್ಕೆ ಬಂದು ಪಂಜಾಬದಲ್ಲಿ ಸಿಂಧು ಹಾಗು ಅದರ ಉಪನದಿಗಳ ತೀರ—ಪ್ರದೇಶಗಳು ಫಲವತ್ತಾಗಿರುವದನ್ನು ಕಂಡರು. ಅದಕ್ಕಾಗಿ ಅವರು ಅಲ್ಲಿಯೇ ಕೆಲಕಾಲ ನೆಲಸಿದರು.

---

೧. ಇದು ಕ್ರಿ. ಪೂ. ಸುಮಾರು ೨೦೦೦ ವರುಷಗಳ ಹಿಂದೆ ನಡೆಯಿತು.

ಭಾರತದಲ್ಲಿ ಆರ್ಯಸಂಸ್ಕೃತಿಯ ಕಾಲವೆಂದರೆ ಕ್ರಿ. ಪೂ. ೨೦೦೦ ವರುಷಗಳಿಂದ ಕ್ರಿ. ಪೂ. ೩೨೦ ವರುಷಗಳ ವರೆಗೆ. ಇದರಲ್ಲಿ (೧) ವೇದ ಕಾಲ (೨) ರಾಮಾಯಣ, ಮಹಾಭಾರತಗಳ ಕಾಲ (೩) ಧರ್ಮಶಾಸ್ತ್ರ ಹಾಗೂ ವೇದಾಂತಕಾಲಗಳೆಂದು ಮೂರು ವಿಭಾಗಗಳು.[೨] ವೇದಕಾಲದಲ್ಲಿ ಆರ್ಯರು ಪಂಜಾಬದಲ್ಲಿ[೩] ವಾಸಿಸಿದರು. ಆ ಪ್ರದೇಶವು **ಬ್ರಹ್ಮಾವರ್ತ**ವೆಂದು ಹೆಸರಾಯಿತು. ಇಲ್ಲಿಯೇ ಅವರ ಮೂಲಗ್ರಂಥವಾದ ‘ ಋಗ್ವೇದ ’ ಎಂಬದು ರಚಿತವಾಯಿತು. ಅವರು ಅಲ್ಲಿರುವಾಗಲೇ ಹೊರಗಿನಿಂದ ಆರ್ಯರ ಹೊಸ ಸಂಗಡಗಳು ಪಂಜಾಬಕ್ಕೆ ಬಂದವು. ಅವು ಮುಂಚಿನ ಸಂಗಡಗಳನ್ನು ಮುಂದೆ ದೂಡಿದವು. ಆದ್ದರಿಂದ, ಇವು ಮುಂದೆ ಸಾಗಿ ಗಂಗಾ ಮತ್ತು ಯಮುನಾ ನದಿಗಳ ಮಧ್ಯ ಪ್ರದೇಶಕ್ಕೆ ಬಂದು ನೆಲಸಿದವು. ಈ ಪ್ರದೇಶಕ್ಕೆ **ಅಂತರ್ವೇದಿ**ಯೆಂದು ಹೆಸರಿತ್ತು. ಇಲ್ಲಿರುವಾಗ ಆರ್ಯರು ತಮ್ಮ ಇತರ ವೇದಗಳನ್ನು ರಚಿಸಿದರು. ಮುಂದೆ ಅವರು ಬರಬರುತ್ತ ಇಡೀ ಉತ್ತರಭಾರತವನ್ನೇ ವ್ಯಾಪಿಸಿದರು. ಆ ಪ್ರದೇಶವು **ಆರ್ಯಾವರ್ತ**ವಾಯಿತು. ಅದು ಆರ್ಯರ ರಾಮಾಯಣ–ಮಹಾಭಾರತಗಳ ಕಾಲ. ಮೂರನೆಯದಾದ ಧರ್ಮಶಾಸ್ತ್ರ ಹಾಗು ವೇದಾಂತ ಕಾಲಧಲ್ಲಿ, ಆರ್ಯರು ಇಡಿ ಭಾರತದಲ್ಲಿ ಪಸರಿಸಿದರು ( ಚಿತ್ರ ೧ ನೋಡಿರಿ ). ಅವರ ಸಂಸ್ಕೃತಿಯ ಪ್ರಭಾವವು ಎಲ್ಲೆಡೆಯಲ್ಲಿಯೂ ತಲೆದೋರಿತು. ಇದಕ್ಕಾಗಿ ಆರ್ಯರನ್ನು ಹಿಂದುಗಳೆಂದೂ ಮತ್ತು ಅವರ ಸಂಸ್ಕೃತಿಯನ್ನು ಹಿಂದು ಸಂಸ್ಕೃತಿಯೆಂದೂ ಕರೆಯುವ ಯುಂಟಾಯಿತು.

**ಭಾರತದ ಮೂಲನಿವಾಸಿಗಳೊಂದಿಗೆ ಆರ್ಯರ ಸಂಪರ್ಕ:—**

ಆರ್ಯರು ಪಂಜಾಬದಲ್ಲಿ ನೆಲಸಿದಾಗ, ಅವರು ಅಲ್ಲಿಯ ಜನರೊಂದಿಗೆ ಹೋರಾಡಬೇಕಾಯಿತು. ಏಕೆಂದರೆ ಅವರು ಆರ್ಯರನ್ನೂ ಅವರ ದೇವತೆಗಳನ್ನೂ ಅವರ ಆಚಾರ–ವಿಚಾರಗಳನ್ನೂ ದ್ವೇಷಿಸಿ ಅಲ್ಲಗಳೆಯಹತ್ತಿದರು.

---

೨. ವೇದಕಾಲ, ಕ್ರಿ. ಪೂ. ೨೦೦೦–ಕ್ರಿ. ಪೂ. ೧೪೦೦; ರಾಮಾಯಣ–ಮಹಾಭಾರತಗಳ ಕಾಲ, ಕ್ರಿ. ಪೂ. ೧೪೦೦—ಕ್ರಿ. ಪೂ. ೮೦೦; ಧರ್ಮಶಾಸ್ತ್ರ ಹಾಗೂ ವೇದಾಂತ ಕಾಲ, ಕ್ರಿ. ಪೂ. ೮೦೦–ಕ್ರಿ. ಪೂ. ೩೨೦.

೩. ಆಗಿನ ಸರಸ್ವತಿ ಮತ್ತು ದೃಶದ್ವತಿ ನದಿಗಳ ನಡುವಿನ ಪ್ರದೇಶದಲ್ಲಿ.

ಆರ್ಯರು ಅವರನ್ನು 'ದಸ್ಯು' ಅಥವಾ 'ದಾಸ' ರೆಂದೂ 'ಅನಾರ್ಯ' ರೆಂದೂ ಕರೆದರು. ಎಷ್ಟೋ ಕಾಳಗಗಳನ್ನು ಹೂಡಿ ಅವರನ್ನು ಸೋಲಿಸಿದರು. ದಾಸರು ಕೊನೆಗೆ ಆರ್ಯರಿಗೆ ಶರಣುಬಂದು ಅವರ ಸಂಸ್ಕೃತಿಯನ್ನು ಸ್ವೀಕರಿಸಿದರು. ಇದೇ ರೀತಿಯು ಉತ್ತರಭಾರತದ ಇತರ ಕೆಲವೆಡೆಗಳಲ್ಲಿಯೂ ನಡೆಯಿತು. ಆದರೆ ಕೆಲವೆಡೆ ಅವರು ಹೋಗಿ ನೆಲಸಿದ ಮಾತ್ರದಿಂದಲೇ ಅಲ್ಲಿಯ ಮೂಲ ನಿವಾಸಿಗಳು ಆರ್ಯಸಂಸ್ಕೃತಿಯ ಶ್ರೇಷ್ಠತೆಯನ್ನು ಮನದಂದು ಅದನ್ನು ತಾವಾಗಿಯೇ ಸ್ವೀಕರಿಸಿದರು. (ಉದಾ:—ದೂರದ ದಕ್ಷಿಣಭಾರತದಲ್ಲಿ ಕೆಲವೊಂದು ಆರ್ಯಪಂಗಡಗಳು ಮತ್ತು ಧರ್ಮೋಪದೇಶಕರು ಕ್ರಮೇಣವಾಗಿ ದಕ್ಷಿಣದಲ್ಲಿ ಹೋಗಿ ನೆಲಸಿದುದೇ ಇದಕ್ಕೆ ಕಾರಣವಾಯಿತು.) ತಾವು ಗೆದ್ದ ಪ್ರದೇಶಗಳಲ್ಲಿ ಆರ್ಯರು ಮೂಲನಿವಾಸಿಗಳ ಸಂಸ್ಕೃತಿಯನ್ನು ತಾವೂ ತುಸು ಮಟ್ಟಿಗೆ ಅಳವಡಿಸಿಕೊಂಡರು. ತಮ್ಮ ಉಚ್ಚ ಸಂಸ್ಕೃತಿಯ ಪ್ರಭಾವವನ್ನು ಅವರ ಮೇಲೆ ಹೇರಿದರು. ಈ ರೀತಿಯಾಗಿ ಕ್ರಿ. ಪೂ. ೬ನೆಯ ಶತಮಾನದ ಸುಮಾರಿಗೆ ಇಡೀ ಭಾರತದಲ್ಲಿ ಆರ್ಯಧರ್ಮ, ಆರ್ಯಸಂಸ್ಕೃತಿಗಳು ಹಿಂದು ಧರ್ಮ, ಹಿಂದು ಸಂಸ್ಕೃತಿಗಳಾಗಿ ರೂಪುಗೊಂಡವು.

**ಪ್ರಾಚೀನ ಆರ್ಯರ ಸಾಮಾಜಿಕ ಜೀವನ:—**

ವೇದಕಾಲದ ಆರ್ಯರ ಸಮಾಜರಚನೆಯ ತಳಹದಿಯು 'ಕುಟುಂಬ' ವಾಗಿತ್ತು. ತಂದೆಯೇ ಕುಟುಂಬದ ಯಜಮಾನ. ತಂದೆಯೊಂದಿಗೆ ಕುಟುಂಬದ ಎಲ್ಲ ಜನರು ಒಂದೇ ಮನೆಯಲ್ಲಿ ವಾಸಿಸುತ್ತಿದ್ದರು. ಮನೆಗಳನ್ನು ಬಹುತರ ಕಟ್ಟಿಗೆಯಿಂದ ಕಟ್ಟಲಾಯಿತು. ಅವುಗಳಲ್ಲಿ ಬೇರೆ ಬೇರೆ ವಿಭಾಗಗಳಿದ್ದವು. ಅಗ್ನಿಶಾಲೆಯೂ ಇಂಥದೊಂದು ವಿಭಾಗ.

ಕುಟುಂಬದಲ್ಲಿ ಸ್ತ್ರೀ–ಪುರುಷರ ಅಧಿಕಾರಗಳು ಸಮಾನವಾಗಿದ್ದವು. ಸಾಮಾನ್ಯವಾಗಿ, ಗಂಡಸರು ಹೊರಗೆಲಸಗಳನ್ನು ಮಾಡಿದರೆ, ಹೆಂಗಸರು ಒಳಗೆಲಸಗಳನ್ನು ನೋಡಿಕೊಳ್ಳುತ್ತಿದ್ದರು. ಹವ್ಯಕವ್ಯಗಳಲ್ಲಿ–ಶುಭಾಶುಭ ಕಾರ್ಯಗಳಲ್ಲಿ–ಗಂಡನೊಂದಿಗೆ ಹೆಂಡತಿಗೂ ಸ್ಥಾನವಿತ್ತು. ಅವಳೂ ಮಂತ್ರೋಚ್ಚಾರ ಮಾಡುತ್ತಿದ್ದಳು. ಹೆಂಗಸರ ವಿದ್ಯಾಭ್ಯಾಸವನ್ನು ದುರ್ಲಕ್ಷಿಸುತ್ತಿದ್ದಿಲ್ಲ. ಆಗಿನ ಕೆಲವು ಹೆಂಗಳೆಯರು ವೈದಿಕ ಸ್ತೋತ್ರಗಳನ್ನು ರಚಿಸಿದರು. ಕೆಲವರಂತೂ ಋಷಿಮಟ್ಟಕ್ಕೇರಿದರು!

**ಆಹಾರ :**— ಗೋದಿ, ಹಾಲು, ಮೊಸರು, ಬೆಣ್ಣೆ, ಬೇರೆ ಬೇರೆ ಪ್ರಕಾರದ ಕಾಯಿ–ಪಲ್ಯ ಮತ್ತು ಹಣ್ಣು–ಹಂಪಲಗಳು ನಿತ್ಯದ ಆಹಾರಕ್ಕಾಗಿ ಬಳಕೆಯಲ್ಲಿದ್ದವು. ಮಾಂಸಾಹಾರವೂ ಕೆಲವು ಸಲ ಕಂಡುಬರುತ್ತಿತ್ತು. ಸೋಮಪಾನ,[೫] ಸುರಾಪಾನ[೬] ಗಳೆರಡೂ ರೂಢಿಯಲ್ಲಿದ್ದವು.

**ಉಡಿಗೆ–ತೊಡಿಗೆ :**–ವಸ್ತ್ರಾಲಂಕಾರಗಳ ಬಗ್ಗೆ ವಿಶೇಷ ಲಕ್ಷ್ಯಕೊಡಲಾಗುತ್ತಿತ್ತು. ವೇದಕಾಲದಲ್ಲಿ ಮೈಮೇಲಿನ ವಸ್ತ್ರಗಳೆಂದರೆ–೧. ನೀವಿ (ಒಳ ವಸ್ತ್ರ) ೨. ವಾಸ (ಮೇಲ್ಬಟ್ಟೆ) ೩. ಅಧಿವಾಸ (ಉದ್ದವಾದ ಮೇಲಂಗಿ). ವಸ್ತ್ರಗಳು ಹತ್ತಿಯಿಂದ ಇಲ್ಲವೆ ಉಣ್ಣೆಯಿಂದ ತಯಾರಾಗುತ್ತಿದ್ದವು. ಚಿಗರಿಯ ಚರ್ಮವೂ ಉಡುಪಿಗಾಗಿ ಬಳಕೆಯಲ್ಲಿತ್ತು. ವಿಶೇಷವಾಗಿ ಹಬ್ಬಹುಣ್ಣಿಮೆಯ ದಿನಗಳಲ್ಲಿ ಮೈಮೇಲೆ ಚಿನ್ನದ ಆಭರಣಗಳೂ, ತಲೆಯಮೇಲೆ ಹೂವಿನ ದಂಡೆಗಳೂ ಸಾಮಾನ್ಯವಾಗಿ ಕಣ್ಣಿಗೆ ಬೀಳುತ್ತಿದ್ದವು. ಹೆಂಗಸರೂ ತಲೆಗೆ ರುಮಾಲು ಸುತ್ತುತ್ತಿದ್ದರು (ಚಿತ್ರ ೨ ನೋಡಿರಿ). ತಲೆಯ ಕೂದಲವನ್ನು ಉದ್ದವಾಗಿ ಬೆಳಸಿ ಬಾಚಿಕೊಳ್ಳುತ್ತಿದ್ದರು. ಹೆಂಗಸರು ಕೂದಲವನ್ನು ಹಿಕ್ಕಿ ಜಡೆಹಾಕಿಕೊಳ್ಳುತ್ತಿದ್ದರು.

**ಮನೋರಂಜನ :**–ಗಂಡಸರಿಗೆ ಪ್ರೀತಿಯ ಮನೋರಂಜನಗಳೆಂದರೆ– ಬೇಟೆ, ಯುದ್ಧನರ್ತನ ಮತ್ತು ಜೂಜಾಟ. ಒಮ್ಮೊಮ್ಮೆ ಜೂಜಿನಲ್ಲಿ ಗಂಡಸರು ತಮ್ಮ ಮಡದಿ–ಮಕ್ಕಳನ್ನು ಪಣವಾಗಿ ಹಚ್ಚುತ್ತಿದ್ದರು. ದ್ಯೂತಕ್ಕೆ ಕರೆದಾಗ ಬಾರದಿರುವದು ಹೇಡಿತನದ ಲಕ್ಷಣವೆನಿಸಿತು. ಹೆಂಗಸರು ಗಾಯನ, ನರ್ತನಗಳಲ್ಲಿ ತಮ್ಮ ಮೇಲ್ಮೆಯನ್ನು ತೋರಿಸುತ್ತಿದ್ದರು. ಬರಬರುತ್ತ ರಥಗಳ ಜೂಜೋಟವೂ ಜನಪ್ರಿಯವಾಯಿತು.

**ಉದ್ಯೋಗ:**—ಒಕ್ಕಲುತನವೇ ಮುಖ್ಯ ಉದ್ಯೋಗವಾಗಿತ್ತು. ಆದರೆ ಪಶುಪಾಲನೆಗೂ ಅಷ್ಟೇ ಮಹತ್ವವಿತ್ತು. ಆಕಳು, ಎತ್ತು, ಕುದುರೆ, ಆಡು,

---

೫. ಸೋಮವೆಂಬ ಬಳ್ಳಿಯ ರಸದ ಸೇವನೆ. ಸೋಮಪಾನವು ಧಾರ್ಮಿಕ ಆಚರಣೆಗಳಲ್ಲಿ ನಡೆಯಬೇಕೆಂಬ ನಿರ್ಬಂಧವಿತ್ತು.

೬. ಸುರಾ (ಸುರೆ), ಇದು ಅಮಲೇರಿಸುವ ಸಾಮಾನ್ಯಪಾನ. ಸುರಾಪಾನವು ಕೆಲವು ಕಾಲದ ಮೇಲೆ ನಿಷೇಧಿಸಲ್ಪಟ್ಟಿತು.

ಕುರಿ, ನಾಯಿಗಳು ಆರ್ಯರು ಸಾಕುತ್ತಿದ್ದ ಪ್ರಾಣಿಗಳು. ಆಕಳಿಗೆ ಬಹಳ ಗೌರವವಿತ್ತು. ಅದು ಪವಿತ್ರ ಪ್ರಾಣಿ ಎನಿಸಿತು. ಗೋಸಮೂಹವು ಸಿರಿವಂತಿಕೆಯ ಲಕ್ಷಣವಾಯಿತು. ಭೂಮಿಯಲ್ಲಿ ಗೋದಿ, ಜವೆಗೋದಿ ಮುಂತಾದವನ್ನು ಬೆಳೆದರು. ಉಪ್ಪಾರ, ಕಮ್ಮಾರ, ಬಡಿಗ, ನೇಕಾರ, ಅಕ್ಕಸಾಲಿಗ, ಚರ್ಮ ಹದಮಾಡುವವ, ನಾಪಿತ (ಕೆಲಸಿಗ) ಮತ್ತು ನಟ ಇವರು ಆ ಕಾಲದ ಮುಖ್ಯ ಕಸಬುಗಾರರು.

ವ್ಯಾಪಾರವು ಮುಖ್ಯವಾಗಿ ವಿನಿಮಯ ರೂಪದಲ್ಲಿ ನಡೆಯುತ್ತಿತ್ತು. 'ನಿಷ್ಕ' ಎಂಬ ಬಂಗಾರದ ನಾಣ್ಯವೂ ಬಳಕೆಯಲ್ಲಿತ್ತು.

## ಸಾಮಾನ್ಯ ರೀತಿನೀತಿಗಳು :—

ಆಗಿನ ಸಮಾಜದಲ್ಲಿ ಬಾಲವಿವಾಹಪದ್ಧತಿ ಇರಲಿಲ್ಲ. ಗಂಡಸು ಸಾಮಾನ್ಯವಾಗಿ ಒಬ್ಬ ಹೆಂಗಸನ್ನೇ ಲಗ್ನವಾಗುತ್ತಿದ್ದನು. ವಿಧವೆಯರು 'ಸತಿ ಹೋಗು'ವ ರೂಢಿಯಿತ್ತೆಂದು ತೋರುವದಿಲ್ಲ. ಅವರಿಗೆ ಪುನರ್ವಿವಾಹದ ಅಪ್ಪಣೆಯಿತ್ತು. ಸಮಾಜದಲ್ಲಿ ಸ್ತ್ರೀಯರಿಗೆ ಯೋಗ್ಯ ಮಾನ ಮರ್ಯಾದೆಗಳು ದೊರೆಯುತ್ತಿದ್ದವು.

ಜಾತಿಗಳು ಆಗ ತಾನೆ ತಲೆದೋರುವದರಲ್ಲಿ ಇದ್ದವು. ಆದ್ದರಿಂದ ಆಗಿನ ಜನರ ಕಸಬುಗಳಿಗೆ ಜಾತಿಯು ಅಡ್ಡ ಬರಲಿಲ್ಲ.

ಹೆಣಗಳನ್ನು ಸುಡುವ ಇಲ್ಲವೆ ಹುಗಿಯುವ ರೂಢಿಯಿತ್ತು.

## ರಾಜ್ಯಭಾರ ಪದ್ಧತಿ :—

ರಾಜ್ಯದಾಡಳಿತೆಯಲ್ಲಿ ರಾಜನೇ ಮುಖ್ಯನು. ಅರಸೊತ್ತಿಗೆಯು ಸಾಮಾನ್ಯವಾಗಿ ವಂಶಪರಂಪರೆಯಾಗಿ ಸಾಗುತ್ತಿತ್ತು. ಅರಸನು ಪ್ರಜೆಗಳ ಒಪ್ಪಿಗೆಯನ್ನು ಪಡೆಯದೆ ರಾಜ್ಯಭಾರ ಮಾಡುತ್ತಿದ್ದಿಲ್ಲ. ಪ್ರಜೆಗಳನ್ನು ಮತ್ತು ರಾಜ್ಯವನ್ನು ಸಂರಕ್ಷಿಸುವದು ಅವನ ಮುಖ್ಯ ಕರ್ತವ್ಯವಾಗಿತ್ತು. ಗೂಢಚಾರರಿಂದ ತಪ್ಪಿತಸ್ಥರನ್ನು ಶೋಧಿಸಿ ಶಿಕ್ಷೆ ವಿಧಿಸುತ್ತಿದ್ದನು. ಅರಸನೇ ಮುಖ್ಯ ನ್ಯಾಯಾಧೀಶನು. ಆಡಳಿತೆಯಲ್ಲಿ ಸಹಾಯ ಮಾಡಲು ಅವನಿಗೆ 'ಸಮಿತಿ'[೭]

೭. ಇದು ಸಾಮಾನ್ಯ ಪ್ರತಿನಿಧಿಗಳ ಮಂಡಲ. ಇದರ ಕಾರ್ಯಕಲಾಪಗಳಲ್ಲಿ ರಾಜನೂ ಪ್ರಜೆಗಳೂ ಕೂಡಿಯೆ ಕೆಲಸ ಮಾಡುತ್ತಿದ್ದರು.

ಮತ್ತು 'ಸಭೆ'[೮]ಗಳೆಂಬ ಎರಡು ಸಹಾಯಕ ಮಂಡಲಗಳಿದ್ದವು. ಅವನ ಕೈಕೆಳಗಿನ ಅಧಿಕಾರಿಗಳಲ್ಲಿ 'ಪುರೋಹಿತ' ಮತ್ತು 'ಸೇನಾನಿ' ಗಳೆಂಬವರು ಮುಖ್ಯರು. ಪುರೋಹಿತನು ಅರಸನಿಗೆ ಸಲಹೆ ಕೊಡುವದನ್ನಷ್ಟೇ ಅಲ್ಲದೆ, ಯುದ್ಧದಲ್ಲಿ ಅವನಿಗೆ ಗೆಲವು ಸಿಗಲೆಂದು ಮಂತ್ರ-ತಂತ್ರಗಳನ್ನು ಮಾಡುವನು. ಯುದ್ಧದಲ್ಲಿ ಅರಸನು ಮುಂದಾಳುವಾಗಿ ಹೊರಗಿನ ವೈರಿಗಳೊಂದಿಗೆ ಕಾದಾಡುವನು. ಸೇನಾನಿಯೇ ದಂಡನಾಯಕನು. ದಂಡಿನಲ್ಲಿ ಕಾಲಾಳುಗಳು ರಥಿಕರು ಮತ್ತು ಕುದುರೆಗಳಿದ್ದವು. ಸೈನಿಕರು ಮೈಗೆ ಉಕ್ಕಿನ ಕವಚವನ್ನು, ತಲೆಗೆ ಶಿರಸ್ತ್ರಾಣವನ್ನು ಧರಿಸುತ್ತಿದ್ದರು. ಧನುಷ್ಯ ಬಾಣ, ಕತ್ತಿ, ಕಠಾರಿ, ಕೊಡ್ಲಿಗಳು ಯುದ್ಧಾಯುಧಗಳಾಗಿದ್ದವು (ಚಿತ್ರ ೩ ನೋಡಿರಿ). ಯುದ್ಧರಂಗದಲ್ಲಿ ಪತಾಕೆಗಳು ಕಂಗೊಳಿಸುತ್ತಿದ್ದವು, ವಾದ್ಯಗಳು ಮೊಳಗುತ್ತಿದ್ದವು.

ಶಾಂತಿಯ ಸಮಯದಲ್ಲಿ ರಾಜನು ಥಳಥಳಿಸುವ ಉಡುಪು ಧರಿಸುವನು. ದಿವ್ಯವಾದ ಅರಮನೆಯಲ್ಲಿ ವಾಸಿಸುವನು.

## ಪ್ರಾಚೀನ ಆರ್ಯರ ಧಾರ್ಮಿಕಜೀವನ :—

ಆರ್ಯರು ಪಂಚಮಹಾಭೂತಗಳನ್ನು[೯] ದೇವತೆಗಳೆಂದು ತಿಳಿದರು. ಒಳ್ಳೆ ಬೆಳೆ, ಒಳ್ಳೆ ಗಂಡು ಸಂತತಿ, ಧನಪ್ರಾಪ್ತಿ, ಶತ್ರುನಾಶ, ಮೃತರಿಗೆ ಸದ್ಗತಿ—ಇವು ಆಗಿನ ಆರ್ಯರ ಮುಖ್ಯ ಬೇಡಿಕೆಗಳಿದ್ದವು. ಇವುಗಳಿಗಾಗಿ ಅವರು ಪಂಚಮಹಾಭೂತಗಳನ್ನು ಬೇರೆ ಬೇರೆ ಹೆಸರಿನಿಂದ ಪೂಜಿಸಹತ್ತಿದರು. ಈ ರೀತಿಯಾಗಿ, ಇಂದ್ರ, ವರುಣ, ವಾಯು, ಸೂರ್ಯ ಇವರು ವೇದಕಾಲದಲ್ಲಿ ಆರ್ಯರ ಶ್ರೇಷ್ಠ ದೇವತೆಗಳಾದರು. ಇವರು ಸೃಷ್ಟಿಯ ವಿಶಿಷ್ಟ ರೂಪಗಳ ಪ್ರತೀಕಗಳೆಂ[೧೦]ರೆನಿಸಿದರು. ಅದರಿಂದ ಆರ್ಯರು ಸೃಷ್ಟಿಪೂಜಕರೆನಿಸಿದರು. ಪೃಥ್ವಿಯು

೮. ಇದು ಹಿರಿಯರ ಮಂಡಲ. ಇದರಲ್ಲಿ ಸಿರಿವಂತರೇ ಬಹಳ. ಜನತೆಗೆ ಸಂಬಂಧಿಸಿದ ಮಹತ್ವದ ವಿಷಯಗಳಲ್ಲಿ ತನ್ನ ತೀರ್ಮಾನ ಕೊಡುವದು, ನ್ಯಾಯದಾನದಲ್ಲಿ ಮುಖ್ಯಪಾತ್ರ ವಹಿಸುವದು ಇವೇ ಮೊದಲಾದವು ಇದರ ಮುಖ್ಯಕಾರ್ಯಗಳಾಗಿದ್ದವು.

೯. ಪೃಥ್ವಿ, ನೀರು, ತೇಜಸ್ಸು, ವಾಯು ಮತ್ತು ಆಕಾಶ.

೧೦. ಪ್ರತಿಬಿಂಬ.

ಆರ್ಯರ ಹೆಣ್ಣು ದೇವತೆ. ಯಜ್ಞಯಾಗಾದಿಗಳಲ್ಲಿ ಅರ್ಪಿಸಿದ ಆಹುತಿಗಳನ್ನು ಬೇರೆ ಬೇರೆ ದೇವತೆಗಳಿಗೆ ಸಲ್ಲಿಸಲು ಅಗ್ನಿಯು ವಾಹಕ ದೇವತೆಯಾದನು. ಮೃತ್ಯುದೇವತೆಯನ್ನು ಅವರು 'ಯಮ' ಎಂದು ಕರೆದರು. ಆರ್ಯರು ಮೊದಮೊದಲು ಈ ದೇವತೆಗಳನ್ನು ಸ್ತೋತ್ರಗಳಿಂದ ಪ್ರಾರ್ಥಿಸಿದರು. ಇವು ಛಂದಸ್ಸಿನ ನೇಮಗಳಿಗೆ ಅನುಸಾರವಾಗಿ ರಚಿತವಾದವು. ಇಂಥ ಸ್ತೋತ್ರಗಳಿಗೆ ಋಕ್ಕು (ಋಚ) ಗಳೆನ್ನುವರು. ಇವುಗಳ ಸಂಗ್ರಹವೇ ಆರ್ಯರ ಮೂಲಗ್ರಂಥ ವೆನಿಸಿದ ಋಗ್ವೇದವು. ಕಾಲವು ಗತಿಸಿದಂತೆ, ಇತರ ಮೂರು ವೇದಗಳು— ಯಜುರ್ವೇದ,[೧೧] ಸಾಮವೇದ,[೧೨] ಅಥರ್ವವೇದ[೧೩]—ರಚಿಸಲ್ಪಟ್ಟವು.

ಇವೆಲ್ಲವೂ ದೇವರ ಪ್ರೇರಣೆಯಿಂದಲೇ ಋಷಿಗಳ ಬಾಯಿಯಿಂದ ಹೊರ ಬಿದ್ದವೆಂಬ ಭಾವನೆಯಿಂದ ಹಿಂದುಗಳು ವೇದಗಳನ್ನು 'ಅಪೌರುಷೇಯ'[೧೪] ವೆಂದು ನಂಬುತ್ತಾರೆ. ಮೊದಮೊದಲು ಸ್ತೋತ್ರಗಳಿಂದ ತಮ್ಮ ದೇವತೆ ಗಳನ್ನು ಒಲಿಸಿಕೊಳ್ಳಲು ಪ್ರಯತ್ನಿಸಿದ ಆರ್ಯರು, ಬರಬರುತ್ತ ಅವರ ಪ್ರಸನ್ನತೆ ಗಾಗಿ ಯಜ್ಞ-ಯಾಗಾದಿಗಳನ್ನು ಮಾಡಹತ್ತಿದರು. ಇದೇ ಯಜುರ್ವೇದ ಸಾಮವೇದಗಳ ರಚನೆಗೆ ಕಾರಣವಾಯಿತೆನ್ನಬಹುದು. ಮತ್ತೂ ಕಾಲವು ಗತಿಸಿದಂತೆ, ಉಪವೇದ,[೧೫] ವೇದಾಂಗ[೧೬] ಗಳೆಂಬ ಹೊಸ ಸಾಹಿತ್ಯವುಂಟಾ ಯಿತು. ಇವೆಲ್ಲ ಒಟ್ಟುಗೂಡಿ ಆರ್ಯರ ವೈದಿಕ ಸಾಹಿತ್ಯ ಅಥವಾ ವೈದಿಕ ವಾಙ್ಮಯವೆಂದು ಹೆಸರಾಯಿತು.

೧೧. ಯಜ್ಞಗಳಿಗೆ ಸಂಬಂಧಿಸಿದ ವಿಧಿಗಳನ್ನು ವರ್ಣಿಸುವ ಋಚಗಳ ಸಂಗ್ರಹ.

೧೨. ಯಜ್ಞಗಳಲ್ಲಿ ಸುಶ್ರಾವ್ಯವಾಗಿ ಹಾಡುವ ಉದ್ದೇಶದಿಂದ ಸಂಗ್ರಹಿಸಿದ ಋಚ ಗಳು.

೧೩. ಶತ್ರುನಾಶ, ಆತ್ಮರಕ್ಷಣೆ, ಸಂಕಟನಿವಾರಣೆಗಳಿಗಾಗಿ ಸಂಗ್ರಹಿಸಿದ ಮಂತ್ರ ಗಳು.

೧೪. ಮನುಷ್ಯರಿಂದ ನಿರ್ಮಿತವಾದವುಗಳಲ್ಲ.

೧೫. ಉಪವೇದಗಳು ನಾಲ್ಕು:—೧. ಆಯುರ್ವೇದ ೨. ಧನುರ್ವೇದ ೩. ಗಂಧರ್ವ ವೇದ ೪. ಶಿಲ್ಪಶಾಸ್ತ್ರ.

೧೬ ವೇದಾಂಗಗಳು ಆರು:—೧. ಶಿಕ್ಷಾ ೨. ಛಂದಸ್ಸು ೩. ವ್ಯಾಕರಣ ೪. ನಿರುಕ್ತ ೫. ಕಲ್ಪ ೬. ಜ್ಯೋತಿಷ.

## ಅಭ್ಯಸನಗಳು.

೧. ಕೆಳಗೆ ಕೊಟ್ಟ ವಾಕ್ಯಗಳಲ್ಲಿ ತೆರವಿರುವ ಸ್ಥಳಗಳನ್ನು ಯೋಗ್ಯ ಶಬ್ದಗಳಿಂದ ತುಂಬಿರಿ:—

(ಅ) ಆರ್ಯರು ಭಾರತಕ್ಕೆ ಸುಮಾರು ಕ್ರಿ. ಪೂ.................... ವರುಷಗಳ ಹಿಂದೆ ಬಂದರು.

(ಆ) ವೇದಕಾಲದಲ್ಲಿ...............ಸಿರಿವಂತಿಕೆಯ ಲಕ್ಷಣವೆನಿಸಿತು.

(ಇ) ...............ಯುದ್ಧದಲ್ಲಿ ದಂಡಿನ ಮುಖ್ಯಸ್ಥನು.

(ಈ) ವೇದಕಾಲದಲ್ಲಿ ಮೈಮೇಲಿನ ವಸ್ತ್ರಗಳು ಮುಖ್ಯವಾಗಿ ಮೂರು :—

(ಉ) ವೇದಕಾಲದಲ್ಲಿ ಗಂಡಸರ ಪ್ರೀತಿಯ ಮನೋರಂಜನೆಗಳು:

೧........................೨........................೩........ ..................

೨. ಕೆಳಗೆ ಕೆಲವು ವಾಕ್ಯಗಳನ್ನು ಕೊಟ್ಟಿದೆ. ಪ್ರತಿಯೊಂದು ವಾಕ್ಯದ ಕೊನೆಗೆ ಕಂಸಗಳಲ್ಲಿ ಕೆಲವು ಶಬ್ದಗಳಿವೆ. ಅವುಗಳಲ್ಲಿ ಯೋಗ್ಯ ಶಬ್ದವನ್ನು ಆ ವಾಕ್ಯದ ತೆರವಿರುವ ಸ್ಥಳದಲ್ಲಿ ತುಂಬಿರಿ :—

(ಅ) ಭಾರತದಲ್ಲಿ ಆರ್ಯರು ಮೊದಲು,.................. ದಲ್ಲಿ ನೆಲಸಿದರು. ( ದಕ್ಷಿಣ ಭಾರತ, ಪಂಜಾಬ, ಮಧ್ಯದೇಶ )

(ಆ) ನಿಷ್ಕವೆಂಬುದು...............ನಾಣ್ಯ. ( ತಾಮ್ರದ, ಬೆಳ್ಳಿಯ, ಬಂಗಾರದ ).

(ಇ) ದಕ್ಷಿಣ ಭಾರತದಲ್ಲಿ ಆರ್ಯಸಂಸ್ಕೃತಿ ಉಂಟಾದುದು ಆರ್ಯರ...................(ಬಾಹುಬಲದಿಂದ, ಸಂಪರ್ಕದಿಂದ, ಮೋಸದಿಂದ. )

(ಈ) ವೇದಕಾಲದ ಆರ್ಯಸಮಾಜದಲ್ಲಿ ಸ್ತ್ರೀ-ಪುರುಷರ ಅಧಿಕಾರಗಳು............... ( ಸಮಾನವಿದ್ದವು, ಸಮಾನವಿರಲಿಲ್ಲ. )

(ಉ) ವೇದಕಾಲದ ಆರ್ಯರು...................... ( ಸೃಷ್ಟಿಪೂಜಕರು, ವಿಗ್ರಹ ಪೂಜಕರು. )




ಚಿತ್ರ ೧. ಪ್ರಾಚೀನ ಭಾರತದಲ್ಲಿಯ ಮುಖ್ಯ ರಾಜ್ಯಗಳು.
( ಸುಮಾರು ಕ್ರಿ. ಪೂ. ೧೪೦೦– ಕ್ರಿ. ಪೂ. ೩೨೦ )




ಚಿ. ೩. ಕುಶಲವರು ಶ್ರೀರಾಮನ ಅಶ್ವಮೇಧದ ಕುದುರೆಯನ್ನು ಕಟ್ಟಿರುವರು




ಚಿ. ೪. ಕೌರವ-ಪಾಂಡವ ರಾಜಕುಮಾರರೂ ಏಕಲವ್ಯನೂ



೪ನೆಯ ಪ್ರಕರಣ

## ರಾಮಾಯಣ ಮತ್ತು ಮಹಾಭಾರತಗಳಲ್ಲಿ ಕಂಡುಬರುವ ಸಾಮಾಜಿಕ ಹಾಗೂ ಸಾಂಸ್ಕೃತಿಕ ಜೀವನ.

ರಾಮಾಯಣ ಮತ್ತು ಮಹಾಭಾರತಗಳು ಹಿಂದುಗಳ ಐತಿಹಾಸಿಕ ಮಹಾಕಾವ್ಯಗಳು. ( ಕವಿತೆಯ ರೂಪದಲ್ಲಿ ಬರೆದ ಇತಿಹಾಸಗಳು. )

ರಾಮಾಯಣದಲ್ಲಿ[೧] ಶ್ರೀರಾಮನ ಚರಿತ್ರೆಯ ವಿವರಗಳಿವೆ. ಮಹಾಭಾರತದಲ್ಲಿ[೨] ಕುರುಕುಲದ ಕೌರವಪಾಂಡವರ ಚರಿತ್ರೆಯ ವಿವರಗಳಿವೆ. ರಾಮಾಯಣ ಮಹಾಭಾರತಗಳ ಕಾಲವೆಂದರೆ, ಆ ಮಹಾಕಾವ್ಯಗಳಲ್ಲಿ ವಿವರಿಸಿದ ಸಂಗತಿಗಳು ನಡೆದ ಕಾಲ. ಆ ಕಾಲದಲ್ಲಿ ಆರ್ಯರು ಉತ್ತರ ಭಾರತದ ತುಂಬ ಪಸರಿಸಿದ್ದರೆಂದೂ ಆ ಇಡೀ ಪ್ರದೇಶವನ್ನು ಆರ್ಯಾವರ್ತವೆಂದು ಕರೆಯಲಾಯಿತೆಂದೂ ಹಿಂದಿನ ಪ್ರಕರಣದಲ್ಲಿ ಹೇಳಲಾಗಿದೆ. ಆ ಕಾಲದ ಬಗೆಗೆ ಹೆಚ್ಚಿನ ವಿವರಗಳು ಕೆಳಗಿನಂತಿವೆ:—

**ರಾಮಾಯಣ–ಮಹಾಭಾರತಗಳ ಕಾಲದಲ್ಲಿ ಉತ್ತರ ಭಾರತದಲ್ಲಿಯ ಮುಖ್ಯ ರಾಜ್ಯಗಳು :**— ೧. ಕುರುರಾಜ್ಯ ( ರಾಜಧಾನಿ, ಹಸ್ತಿನಾಪುರ ). ೨. ಪಂಚಾಲ ರಾಜ್ಯ ( ರಾಜಧಾನಿ, ಕಾಂಪಿಲ ). ೩. ಕೋಸಲ ರಾಜ್ಯ ( ರಾಜಧಾನಿ, ಅಯೋಧ್ಯೆ ). ೪. ವಿದೇಹ ರಾಜ್ಯ ( ರಾಜಧಾನಿ, ಮಿಥಿಲೆ ). ೫. ಕಾಶಿರಾಜ್ಯ ( ರಾಜಧಾನಿ, ಕಾಶಿ ಪಟ್ಟಣ ). ಇವು ಸಂಸ್ಕೃತಿ ಮತ್ತು ಘನತೆಗಳಲ್ಲಿ ಒಳ್ಳೇ ಮಿಗಿಲಾದವೆನಿಸಿದವು. ಇವುಗಳ ಹೊರತಾಗಿ ಅಂಗ, ವಂಗ, ಕಳಿಂಗ, ಕಾಂಬೋಜ, ಮಗಧ, ಅವಂತಿ, ಚೇರ, ಚೋಳ, ಕೇರಳ, ಆಂಧ್ರ ಮುಂತಾದ ಚಿಕ್ಕ ಪುಟ್ಟ ರಾಜ್ಯಗಳು ಭಾರತದಲ್ಲಿ ಅಲ್ಲಲ್ಲಿ ಮಿನುಗುತ್ತಿದ್ದವು ( ಚಿತ್ರ ೧ ನೋಡಿರಿ ).

೧. ಈ ಗ್ರಂಥವು ವಾಲ್ಮೀಕಿ ಋಷಿಯಿಂದ ರಚಿತವಾಯಿತು.

೨. ಇದು ವ್ಯಾಸ ಮಹಾಮುನಿಯಿಂದ ರಚಿತವಾಯಿತು.

**‘ ರಾಮಾಯಣ ’ ಕಥೆ:—**

ಪ್ರಾಚೀನ ಕಾಲದಲ್ಲಿ ಅಯೋಧ್ಯೆಯಲ್ಲಿ ಸೂರ್ಯವಂಶದ ದಶರಥನೆಂಬ ಅರಸನು ಆಳುತ್ತಿದ್ದನು. ಅವನಿಗೆ ಮೂರು ಜನ ಮಡದಿಯರಿದ್ದರು. ಹಿರಿಯ ಹೆಂಡತಿಯಾದ ಕೌಸಲ್ಯೆಯಲ್ಲಿ ಶ್ರೀರಾಮನು ಜನಿಸಿದನು. ಮಿಕ್ಕ ಮಡದಿಯರಾದ ಕೇಕಯಿ ಮತ್ತು ಸುಮಿತ್ರೆಯರಲ್ಲಿ ಭರತ, ಲಕ್ಷ್ಮಣ, ಶತ್ರುಘ್ನರೆಂಬ ಮಕ್ಕಳಾದರು. ದಶರಥನಿಗೆ ಮುಪ್ಪು ಬರಲು, ಶ್ರೀರಾಮನಿಗೆ ಯೌವರಾಜ್ಯಪದವನ್ನು ಕೊಡಬಯಸಿ ಸಭೆ ಕೂಡಿಸಿದನು. ಇದು ಕೇಕಯಿಯ ಮನಸ್ಸಿಗೆ ಬರಲಿಲ್ಲ. ಆದ್ದರಿಂದ ತನಗೆ ದಶರಥನು ಹಿಂದಕ್ಕೊಮ್ಮೆ ಕೊಟ್ಟಿದ್ದ ಎರಡು ವಚನಗಳಲ್ಲಿ, ಒಂದರಿಂದ ರಾಮನ ವನವಾಸವನ್ನೂ ಮತ್ತೊಂದರಿಂದ ತನ್ನ ಹೊಟ್ಟೆಯ ಮಗನಾದ ಭರತನಿಗೆ ಪಟ್ಟವನ್ನೂ ಬೇಡಿ ದುರಾಗ್ರಹ ಹಿಡಿದಳು. ತಂದೆಯು ಬೇಡವೆಂದರೂ, ಅವನ ವಚನ ಪಾಲನೆಗಾಗಿ ಶ್ರೀರಾಮನು ವನಕ್ಕೆ ಹೊರಟನು. ಅವನ ಹೆಂಡತಿ ಸೀತೆಯೂ (ಮಲ) ತಮ್ಮ ಲಕ್ಷ್ಮಣನೂ ಅವನನ್ನು ಹಿಂಬಾಲಿಸಿ ಜೊತೆಗಾರರಾದರು. ಇತ್ತ ದಶರಥನು ಪುತ್ರವಿಯೋಗದಿಂದ ಕೊರಗಿ ಮರಣ ಹೊಂದಿದನು. ಭರತನು ವನದಲ್ಲಿ ಅಣ್ಣನನ್ನು ಶೋಧಿಸಿ, ಮರಳಿಬರಲು ಕೇಳಿಕೊಂಡನು. ಶ್ರೀರಾಮನು ಸಮ್ಮತಿಸಲಿಲ್ಲವಾದ್ದರಿಂದ ಅವನ ಪಾದುಕೆಗಳನ್ನು ತಂದು ಪ್ರತಿನಿಧಿಯಂತೆ ರಾಜ್ಯಭಾರ ಸಾಗಿಸಿದನು.

ರಾಮನು ದಂಡಕಾರಣ್ಯವನ್ನು ದಾಟಿ ಪಂಚವಟಿಯಲ್ಲಿ ವಾಸಿಸಿದಾಗ, ಋಷಿಗಳ ಸಂರಕ್ಷಣೆಗಾಗಿ ನೆರೆಹೊರೆಯ ರಾಕ್ಷಸರನ್ನು ಸಂಹರಿಸಿದನು. ಇದರಿಂದ ರೊಚ್ಚಿಗೆದ್ದ ಲಂಕಾಧಿಪತಿಯಾದ ರಾವಣನೆಂಬ ರಕ್ಕಸರಾಜನು ಮೋಸದಿಂದ ರಾಮನ ಹೆಂಡತಿ ಸೀತೆಯನ್ನು ಲಂಕೆಗೆ ಕರೆದೊಯ್ದನು. ಶೋಕದಿಂದ ಸೀತೆಯನ್ನು ಹುಡುಕುತ್ತ ರಾಮಲಕ್ಷ್ಮಣರು ಕಿಷ್ಕಿಂಧೆಗೆ[೧] ಬಂದರು. ರಾಮನು ಅಲ್ಲಿಯ ವಾನರರ ದುಷ್ಟ ಅರಸನಾದ ವಾಲಿಯನ್ನು ಕೊಂದು ಸುಗ್ರೀವನೆಂಬ ಅವನ ತಮ್ಮನಿಗೆ ಪಟ್ಟಗಟ್ಟಿದನು. ವಾನರ ಸೇನಾನಾಯಕನಾದ ಹನುಮಂತನು ಸೀತೆಯ ಶೋಧಕ್ಕಾಗಿ ದಕ್ಷಿಣ

---

೧. ಈಗಿನ ಬಳ್ಳಾರಿ ಜಿಲ್ಲೆಯಲ್ಲಿ.

ಸಮುದ್ರವನ್ನು ಹಾರಿ ಲಂಕೆಗೆ ಹೋಗಿ ಅವಳಿಂದ ಗುರುತೊಂದನ್ನು[೧] ತಂದನು (ಚಿತ್ರ ೨ ನೋಡಿರಿ). ಬಳಿಕ ರಾಮಲಕ್ಷ್ಮಣರು ವಾನರ ಸೇನೆಯ ಸಹಾಯದಿಂದ ಸಮುದ್ರಕ್ಕೆ ಸೇತುವೆಯನ್ನು ಕಟ್ಟಿ, ಲಂಕೆಯ ಮೇಲೆ ದಾಳಿಮಾಡಿದರು. ಯುದ್ಧದಲ್ಲಿ ರಾವಣಾದಿ ರಾಕ್ಷಸರ ಸಂಹಾರ ವಾಯಿತು. ರಾಮನು ರಾವಣನ ತಮ್ಮನಾದ ವಿಭೀಷಣನಿಗೆ ಲಂಕೆಯ ಪಟ್ಟಗಟ್ಟಿ, ಸೀತಾಲಕ್ಷ್ಮಣರೊಂದಿಗೆ ಅಯೋಧ್ಯೆಗೆ ಮರಳಿಬಂದು ಪಟ್ಟ ವೇರಿದನು. ಜೊತೆಗೆ ಹನುಮಂತನೂ ವಿಭೀಷಣನೂ ಬಂದಿದ್ದರು.

ರಾವಣನಲ್ಲಿ ಬಹುಕಾಲವಿದ್ದ ಸೀತೆಯನ್ನು ಮರಳಿ ತಂದಿಟ್ಟು ಕೊಂಡದ್ದರಿಂದ ರಾಮನ ಬಗೆಗೆ ಜನರು ಆಡಿಕೊಳ್ಳಹತ್ತಿದರು. ಇದು ಕಿವಿಗೆ ಬಿದ್ದ ರಾಮನು ಬಸಿರಿದ್ದ ಸೀತೆಯನ್ನು ಉಪಾಯದಿಂದ ಅಡವಿಗೆ ಕಳುಹಿದನು. ಅಲ್ಲಿ ಅವಳು ವಾಲ್ಮೀಕಿ ಋಷಿಯ ಆಶ್ರಮದಲ್ಲಿ ಲವ-ಕುಶ ರೆಂಬ ಅವಳಿ ಮಕ್ಕಳನ್ನು ಹೆತ್ತಳು. ಅವರು ವಾಲ್ಮೀಕಿಯಿಂದ ವಿದ್ಯೆ ಕಲಿತರು. ಇತ್ತ ಶ್ರೀರಾಮನು ಅಶ್ವಮೇಧಯಾಗವನ್ನು ಹೂಡಿ, ಅದ ಕ್ಕಾಗಿ ಅಲೆಯಬಿಟ್ಟ ಕುದುರೆಯು ಆ ಋಷ್ಯಾಶ್ರಮಕ್ಕೆ ಹೋಯಿತು. ಕುಶ-ಲವರು ಅದನ್ನು ತಡೆದು ಕಟ್ಟಿದರು (ಚಿತ್ರ ೩ ನೋಡಿರಿ). ಕಾಳಗದಲ್ಲಿ ಅವರ ಶೌರ್ಯವನ್ನು ಕೇಳಿ ಶ್ರೀರಾಮನೇ ಅಲ್ಲಿಗೆ ಬಂದನು. ಅವರು ಯಾರೆಂ ಬುದು ಅವರ ಬಾಯಿಯಿಂದಲೇ ಅವನಿಗೆ ತಿಳಿದುಬಂದಿತು. ಸಂತೋಷದಿಂದ ಎಲ್ಲರೂ ಅಯೋಧ್ಯೆಗೆ ಮರಳಿದರು. ಭೂಮಿಜೆಯಾದ ಸೀತೆಯು ಮಾತ್ರ ತನ್ನ ತಾಯಿಯ ಹೊಟ್ಟೆಯನ್ನು ಸೇರಿದಳು. ಶ್ರೀರಾಮನು ಎಷ್ಟೋ ವರುಷ ಪ್ರಜಾವಾತ್ಸಲ್ಯದಿಂದ ರಾಜ್ಯಭಾರ ಮಾಡಿದನು.

ಪಿತೃಭಕ್ತಿಗಾಗಿ ರಾಮನೂ, ಪತಿಭಕ್ತಿಗಾಗಿ ಸೀತೆಯೂ, ಸ್ವಾಮಿಭಕ್ತಿ ಗಾಗಿ ಹನುಮಂತನೂ ಜನರಿಗೆ ಇಂದಿಗೂ ಆದರ್ಶರಾಗಿರುವರು. ಭರತ-ಲಕ್ಷ್ಮಣರು ರಾಮನಲ್ಲಿ ತೋರಿಸಿದ ಬಂಧುಪ್ರೇಮ ಅಸಾಮಾನ್ಯವಾದುದು. ಆ ಕಾಲದ ಜನರು ಸುಳ್ಳು ಹೇಳುತ್ತಿರಲಿಲ್ಲ. ಕೊಟ್ಟ ವಚನಕ್ಕೆ ತಪ್ಪುತ್ತಿರ ಲಿಲ್ಲ. ಇಂಥ ರಾಜಪ್ರಜೆಗಳಿದ್ದರೆಂದೇ ಆ ರಾಜ್ಯವು ರಾಮರಾಜ್ಯವೆಂದು

೧. ಚೂಡಾಮಣಿ (ಬೈತಲೆಯ ಆಭರಣ)

ಈಗಲೂ ಹೆಸರಾಗಿದೆ. ಭಾರತವು ಮತ್ತೊಮ್ಮೆ ರಾಮರಾಜ್ಯವಾಗಲೆಂದೇ ಎಲ್ಲರ ಹಾರೈಕೆ !

**'ಮಹಾಭಾರತ' ಕಥೆ:—**

ಹಿಂದಕ್ಕೆ ಹಸ್ತಿನಾಪುರದಲ್ಲಿ[೧] ಚಂದ್ರವಂಶದ ಧೃತರಾಷ್ಟ್ರನೆಂಬ ಅರಸನು ಆಳುತ್ತಿದ್ದನು. ಅವನಿಗೆ ಗಾಂಧಾರಿಯೆಂಬ ಹೆಂಡತಿಯಲ್ಲಿ ದುರ್ಯೋಧನನೆ ಮೊದಲಾದ ೧೦೧ ಮಕ್ಕಳು ಜನಿಸಿದರು. ತಾನು ಹುಟ್ಟು ಗುರುಡನಾದ್ದರಿಂದ ಧೃತರಾಷ್ಟ್ರನು ಹಿರಿಯ ಮಗನಾದ ದುರ್ಯೋಧನನಿಗೇ ಎಲ್ಲ ಅಧಿಕಾರ ಕೊಟ್ಟನು. ಧೃತರಾಷ್ಟ್ರನ ತಮ್ಮನಾದ ಪಾಂಡುರಾಜನಿಗೆ ಕುಂತಿಯೆಂಬ ಹೆಂಡತಿಯಲ್ಲಿ ಧರ್ಮ, ಭೀಮ, ಅರ್ಜುನರೂ, ಮಾದ್ರಿಯೆಂಬ ಬೇರೊಬ್ಬ ಹೆಂಡತಿಯಲ್ಲಿ ನಕುಲ ಸಹದೇವರೂ ಜನಿಸಿದರು. ತಂದೆಯು ಮರಣಹೊಂದಿದ್ದರಿಂದ ಪಾಂಡವರು ತಮ್ಮ ಪಾಲಿನ ರಾಜ್ಯವನ್ನು ಕೇಳಿ ದರು. ಅವರಿಗೆ ಅತಿ ಚಿಕ್ಕ ಭಾಗವು ದೊರೆಯಿತು. ಅಲ್ಲಿ ಇಂದ್ರಪ್ರಸ್ಥವೆಂಬ ಹೊಸ ರಾಜಧಾನಿಯನ್ನು ಕಟ್ಟಿಕೊಂಡು ಅವರು ಅಭಿವೃದ್ಧಿಹೊಂದುತ್ತ ನಡೆದರು. ಇದು ಸಹನವಾಗದ ದುರ್ಯೋಧನಾದಿಗಳು ಪಾಂಡವರ ವಿನಾಶ ಕ್ಕಾಗಿ ಪರಿಪರಿಯ ಹೀನಕೃತ್ಯ ಮಾಡಿದರು. ಕೊನೆಗೆ ಉಪಾಯದಿಂದ ಅವ ರನ್ನು ತಮ್ಮೊಂದಿಗೆ ದ್ಯೂತ ( ಲೆತ್ತದಾಟ ) ದಲ್ಲಿ ತೊಡಗಿಸಿದರು. ಕೌರವರ ಮೋಸದಿಂದ ಅವರಿಗೆ ಸೋಲುಂಟಾಯಿತು. ಪಾಂಡವರ ಪಾಲಿಗೆ ವನ ವಾಸವು ಬಂದಿತು. ಅದನ್ನು ಕೊನೆಗೊಳಿಸಿ ಬಂದು ಪಾಂಡವರು ಮತ್ತೆ ತಮ್ಮ ಪಾಲನ್ನು ಕೇಳಿದರು. ದುರ್ಯೋಧನನು ನಿರಾಕರಿಸಿದನು. ದ್ವಾರಕೆ ಯಲ್ಲಿಯ ಯಾದವ ಕುಲದ ಅರಸನಾದ ಶ್ರೀಕೃಷ್ಣನ ಸಂಧಾನವೂ ಫಲಿಸ ಲಿಲ್ಲ. ಆದ್ದರಿಂದ ಕುರುಕ್ಷೇತ್ರವೆಂಬಲ್ಲಿ ಕೌರವ ಪಾಂಡವರ ನಡುವೆ ಅವಿರತ ವಾಗಿ ೧೮ ದಿನಗಳ ವರೆಗೆ ಘನಘೋರ ಯುದ್ಧವಾಯಿತು. ಯುದ್ಧದಲ್ಲಿ ಶ್ರೀಕೃಷ್ಣನು ಅರ್ಜುನನ ಸಾರಥಿಯಾದನು. ಕೌರವರು ನಾಶವಾದರು. ಪಾಂಡವರು ವಿಜಯಿಗಳಾದರು. ಅವರಿಗೆ ರಾಜ್ಯವು ದೊರೆಯಿತು. ಸಾರ್ವ ಭೌಮತ್ವವನ್ನು ಸೂಚಿಸುವ ಅಶ್ವಮೇಧಯಾಗವನ್ನು ಮಾಡಿ ಅವರು ಬಹು ಕಾಲ ರಾಜ್ಯವಾಳಿದರು.

---

೧. ಈಗಿನ ದಿಲ್ಲಿಯ ಈಶಾನ್ಯಕ್ಕೆ ಸುಮಾರು ೫೬ ಮೈಲು ದೂರದಲ್ಲಿತ್ತು.

(ಕೌರವಪಾಂಡವರ ಚರಿತ್ರೆಯಲ್ಲಿ, ಬಿಲ್ಲುವಿದ್ಯೆಯಲ್ಲಿ ಅಗಾಧ ಚಾತುರ್ಯವನ್ನು ತೋರಿಸಿದ 'ಏಕಲವ್ಯ'ನೆಂಬ ಬಾಲಕನೂ ಕಾಳಗದಲ್ಲಿ ಅತುಲ ಪರಾಕ್ರಮವನ್ನು ತೋರಿಸಿದ ಅಭಿಮನ್ಯುವೆಂಬ ಚಿಕ್ಕ ತರುಣನೂ ಇಂದಿಗೂ ಪ್ರಸಿದ್ಧರಿರುವರು. ಆದ್ದರಿಂದ ಅವರೀರ್ವರ ಕಥೆಗಳನ್ನು ಸಂಕ್ಷಿಪ್ತವಾಗಿ ಕೆಳಗೆ ಕೊಡಲಾಗಿದೆ.)

**ಏಕಲವ್ಯನ ಕಥೆ:—**

ಏಕಲವ್ಯನು ಒಬ್ಬ ಬೇಡರಾಜನ ಮಗ. ಚಿಕ್ಕಂದಿನಲ್ಲಿ ತಂದೆಯಿಂದ ಬಿಲ್ಲುವಿದ್ಯೆಯನ್ನು ಕಲಿತು ಹೆಚ್ಚಿನ ವಿದ್ಯೆಗಾಗಿ (ಕೌರವಪಾಂಡವ ರಾಜಪುತ್ರರಿಗೆ ಧನುರ್ವಿದ್ಯೆಯನ್ನು ಕಲಿಸುತ್ತಿದ್ದ) ದ್ರೋಣಾಚಾರ್ಯರಲ್ಲಿಗೆ ಹೋದನು. ಧನುರ್ವಿದ್ಯೆಯು ಕ್ಷತ್ರಿಯರ ಸೊತ್ತೆಂದು ಅವರು ಅದನ್ನು ಅವನಿಗೆ ನಿರಾಕರಿಸಿದರು. ಏಕಲವ್ಯನು ಅಡವಿಯಲ್ಲಿ ಅವರ ಮೂರ್ತಿಯೊಂದನ್ನು ನಿರ್ಮಿಸಿ ಅದರ ಸನ್ನಿಧಾನದಲ್ಲಿ ತನಗೆ ತೋಚಿದಂತೆ ಬಿಲ್ಲುವಿದ್ಯೆಯನ್ನು ಮುಂದುವರಿಸಿದನು. ಒಮ್ಮೆ ಅಲ್ಲಿಗೆ ಬೇಟೆಗಾಗಿ ಕೌರವ ಪಾಂಡವರಾಜಕುಮಾರರು ಬೇಟೆನಾಯಿಗಳೊಂದಿಗೆ ಹೋದರು. ದ್ರೋಣಾಚಾರ್ಯರ ಮೂರ್ತಿಯನ್ನು ಪೂಜಿಸುತ್ತಿದ್ದ ಏಕಲವ್ಯನಿಗೆ ನಾಯಿಗಳ ಬೊಗಳುವಿಕೆಯಿಂದ ಶಾಂತಿಭಂಗವಾಯಿತು. ನಾಯಿಗಳ ಬಾಯಿಗಳಿಗೆ ಗುರಿಯಿಟ್ಟು ಬಾಣಗಳನ್ನು ಬಿಟ್ಟನು. ಇದರಿಂದ ಅವುಗಳ ಬಾಯಿಗಳಿಗೆ ಏನೂ ಗಾಯವಾಗದಲೆ, ಬೊಗಳುವ ಶಕ್ತಿಯು ಮಾತ್ರ ಮಾಯವಾಯಿತು! ಕೌರವ ಪಾಂಡವರು ಅವನ ಬಾಯಿಯಿಂದಲೆ ಅವನ ಇಂಥ ಅಗಾಧ ಬಿಲ್ಲುಗಾರಿಕೆಯನ್ನು ಕಲಿತ ಎಲ್ಲ ಸಂಗತಿಗಳನ್ನು ತಿಳಿದುಕೊಂಡರು (ಚಿತ್ರ ೪ ನೋಡಿರಿ). ಅವನ ಗುರುಭಕ್ತಿ ಮತ್ತು ಧನುರ್ವಿದ್ಯೆಯಲ್ಲಿಯ ಅಗಾಧ ಚಾತುರ್ಯಗಳಿಗಾಗಿ ಬೆರಗುಗೊಂಡರು.

**ವೀರ ಅಭಿಮನ್ಯುವಿನ ಕಥೆ:—**

ಭಾರತ ಯುದ್ಧದಲ್ಲಿ ಒಮ್ಮೆ ಕೌರವರು ಚಕ್ರವ್ಯೂಹವನ್ನು[೧] ರಚಿಸಿದರು. ಅದರಲ್ಲಿ ಒಳನುಗ್ಗಿ ಹೊರಬರುವದು ಅರ್ಜುನನ ಹೊರತಾಗಿ ಯಾರಿಗೂ ಗೊತ್ತಿರಲಿಲ್ಲವೆಂದು ತಿಳಿಯಲಾಗಿತ್ತು. ಇದಕ್ಕಾಗಿ ಅವರು ಅರ್ಜುನನಿಲ್ಲದ ಸಮಯವನ್ನೇ ಸಾಧಿಸಿದ್ದರು. ಆದರೆ ಅಭಿಮನ್ಯುವಿಗೆ ಚಕ್ರವ್ಯೂಹದಿಂದ

---

೧. ಒಂದು ವಿಶೇಷತರದ ಸೈನ್ಯರಚನೆ.

ಹೊರಗೆ ಬರುವದು ಗೊತ್ತಿರಲಿಲ್ಲವಾದರೂ, ಒಳನುಗ್ಗುವದು ತಿಳಿದಿತ್ತು. ಇಷ್ಟರಿಂದಲೆ ಧೈರ್ಯಗೊಂಡ ಅಭಿಮನ್ಯುವು ಶೌರ್ಯ–ಸಾಹಸಗಳಿಂದ ಕಾದುತ್ತ ವ್ಯೂಹದೊಳಗೆ ಪ್ರವೇಶಿಸಿದನು. ಅಲ್ಲಿ ತನ್ನ ಪರಾಕ್ರಮದಿಂದ ದ್ರೋಣ ಮೊದಲಾದ ಕೌರವ ವೀರರನ್ನು ದಂಗುಗೊಳಿಸಿದನು! ಆದರೆ ಅಲ್ಲಿಂದ ಪಾರಾಗಿ ಬರುವ ಹಂಚಿಕೆಯು ಗೊತ್ತಿರಲಿಲ್ಲ. ಆದ್ದರಿಂದ ಅವನು ಕೊನೆಗೆ ಅಲ್ಲಿಯೇ ಮಡಿಯಬೇಕಾಯಿತು.

**ಸಾಮಾಜಿಕ ಹಾಗೂ ಸಾಂಸ್ಕೃತಿಕ ಜೀವನ:—**

ರಾಜಕೀಯ ರಚನೆ:—

ರಾಮಾಯಣ–ಮಹಾಭಾರತ ಕಾಲದಲ್ಲಿ ಆರ್ಯರ ರಾಜಕೀಯ ರಚನೆಯು ಮಾರ್ಪಾಟು ಹೊಂದಿತು. ವೇದಕಾಲದ 'ಕುಲ' (ಬಣ) ಗಳು ಇಲ್ಲವಾದವು. ಅವುಗಳ ಪ್ರತಿಯಾಗಿ 'ಪ್ರಾದೇಶಿಕ ರಾಜ್ಯಗಳು' ತಲೆ ದೋರಿದವು. ಪ್ರತಿಯೊಂದು ರಾಜ್ಯದಲ್ಲಿ ಅದರ ರಾಜಧಾನಿ, ಪುರ–ಪಟ್ಟಣ ಗಳು, ಹಳ್ಳಿಪಳ್ಳಿಗಳು ಕಂಡುಬರುತ್ತಿದ್ದವು. ಹಳ್ಳಿಯೇ ಆಡಳಿತೆಯ ತೀರ ಚಿಕ್ಕ ವಿಭಾಗವಾಗಿತ್ತು. ಅದರಲ್ಲಿಯ ತಂಟೆ, ಜಗಳ ಮುಂತಾದವುಗಳನ್ನು ಅಲ್ಲಿಯ ಹಿರಿಯರೆ ಬಗೆಹರಿಸುತ್ತಿದ್ದರು.

ಅರಸನು ರಾಜ್ಯದ ಸೂತ್ರಧಾರನು. ಋಷಿಗಳು ಅವನಿಗೆ ಮಾರ್ಗದರ್ಶ ಕರು. ಅವನಿಗೆ ಸಹಾಯಕ್ಕೆಂದು ಬ್ರಾಹ್ಮಣ ಮತ್ತು ಕ್ಷತ್ರಿಯರ ಸಭೆಗಳು ಮೇಲಿಂದ ಮೇಲೆ ನಡೆಯುತ್ತಿದ್ದವು. ರಾಜನು ಪ್ರಜಾಮತವನ್ನು ಕಡೆಗಣಿಸು ತ್ತಿರಲಿಲ್ಲ. ಜನಹಿತವೇ ಅವನ ಮುಖ್ಯ ಗುರಿ. ಪ್ರಜಾಪಾಲನೆ, ನ್ಯಾಯ ದಾನ, ಧರ್ಮ ಸಂರಕ್ಷಣೆ ಇವು ಅವನ ಮುಖ್ಯ ಕರ್ತವ್ಯಗಳು. ಅರಸನು ವಿಷ್ಣು ವಿನ ಅವತಾರವೆಂದು ಜನರ ಭಾವನೆಯಾಗಿತ್ತು; ಆದರೂ ಅವನು ಪ್ರಜೆಗಳ ಸೇವಕನೆಂದೂ ಅವರು ತಿಳಿದರು.

ರಾಜ್ಯದ ಉತ್ಪನ್ನದ ಬಾಬುಗಳಲ್ಲಿ ಭೂಕಂದಾಯವೂ ಸೇರ್ಪಡೆ ಯಾಗಿತ್ತು. ಅದು ಭೂಮಿಯ ಹುಟ್ಟುವಳಿಯ ಆರನೆಯ ಭಾಗವಿತ್ತು. ಅದನ್ನು ಹಣದ ಇಲ್ಲವೆ ಕಾಳಿನ ರೂಪದಿಂದ ಸಲ್ಲಿಸಬಹುದಾಗಿತ್ತು.

ಬೇಟೆಯಾಡುವದು ಮತ್ತು ದ್ಯೂತಗಳು (ಜೂಜಾಟಗಳು) ಅರಸನ ಪ್ರೀತಿಯ ಮನೋರಂಜನೆಗಳಾಗಿದ್ದವು.

ಯುದ್ಧದಲ್ಲಿ ಚತುರಂಗ ಸೇನೆಯು[೧] ಭಾಗವಹಿಸುತ್ತಿತ್ತು. ಸೈನಿಕರು ಅನೇಕ ಬಗೆಯ ಶಸ್ತ್ರಾಸ್ತ್ರಗಳನ್ನು ಉಪಯೋಗಿಸುತ್ತಿದ್ದರು. ಆದರೆ ದುರ್ಬಲ, ನಿಶ್ಯಸ್ತ್ರ ಇಲ್ಲವೆ ನಿಸ್ಸಹಾಯಕ ವೈರಿಯ ಮೇಲೆ ಶಸ್ತ್ರಾಸ್ತ್ರಗಳನ್ನು ಪ್ರಯೋಗ ಮಾಡುತ್ತಿರಲಿಲ್ಲ. ಏಕೆಂದರೆ ಅಂಥವರೊಂದಿಗೆ ಅವರ ಹಗೆತನವಿರಲಿಲ್ಲ. ಅಂತೆಯೇ ಆ ಕಾಲದ ಯುದ್ಧಕ್ಕೆ 'ಧರ್ಮಯುದ್ಧ' ಎನ್ನುತ್ತಿದ್ದರು.

ರಾಜರು ಸ್ವತಂತ್ರರಿದ್ದರೂ ರಾಜರಾಜರಲ್ಲಿ ಸಾಮಾನ್ಯವಾಗಿ ಪರಸ್ಪರ ಸ್ನೇಹಸಂಬಂಧ, ಸಹಾಯ, ಸಹಕಾರಗಳು ಕಂಡುಬರುತ್ತಿದ್ದವು. ರಾಜ್ಯಗಳು ಬೇರೆ ಬೇರೆ ಇದ್ದರೂ ಎಲ್ಲವುಗಳ ಧರ್ಮ, ಭಾಷೆ, ಸಾಹಿತ್ಯ, ಸಂಸ್ಕೃತಿಗಳು ಸಾಮಾನ್ಯವಿದ್ದುದರಿಂದ ಎಲ್ಲೆಲ್ಲಿಯೂ ಒಂದು ಬಗೆಯ ಏಕರೂಪತೆ ಕಣ್ಣಿಗೆ ಬೀಳುತ್ತಿತ್ತು.

## ಹಳ್ಳಿ ಮತ್ತು ಪಟ್ಟಣಗಳಲ್ಲಿಯ ಸಮಾಜ:—

ಹಳ್ಳಿಗರಲ್ಲಿ ನೂಲುವದು, ನೇಯುವದು, ಒಕ್ಕಲುತನ, ಬಡಿಗತನ ಮತ್ತು ಕಮ್ಮಾರಿಕೆಗಳು ಮುಖ್ಯ ಉದ್ಯೋಗಗಳಾಗಿದ್ದವು. ಪಟ್ಟಣಿಗರ ಕೈಗಾರಿಕೆಯ ವಸ್ತುಗಳು ಒಳ್ಳೇ ಮೇಲ್ತರಗತಿಯವಿದ್ದವು. ಯುದ್ಧಸಮಯದಲ್ಲಿ ಕೂಡ, ನಿತ್ಯದ ಸಾಮಾಜಿಕ ಚಟುವಟಿಕೆಗಳು ನಿರಾತಂಕವಾಗಿ ನಡೆಯುತ್ತಿದ್ದವು. ಪುರೋಹಿತರು (ಋಷಿಗಳು) ಯಜ್ಞಯಾಗಾದಿಗಳ ನಿಯಮಗಳನ್ನು ವಿಸ್ತರಿಸುವದರಲ್ಲಿ, ಸೈನಿಕರು ಗಡಿಗಳನ್ನು ಸಂರಕ್ಷಿಸುವದರಲ್ಲಿ, ಒಕ್ಕಲಿಗರು ಒಕ್ಕಲುತನದಲ್ಲಿ ಮತ್ತು ಕಸಬುಗಾರರು ತಮ್ಮತಮ್ಮ ಕಸಬುಗಳಲ್ಲಿ ಅಡೆತಡೆಗಳಿಲ್ಲದೆ ತೊಡಗಿರುತ್ತಿದ್ದರು.

ಆನೆ, ಕುದುರೆ, ಒಂಟೆ, ರಥ, ಬಂಡಿಗಳು ಆಗಿನ ವಾಹನ ಸೌಕರ್ಯಗಳು. ಅಚ್ಚುಕಟ್ಟಾದ ಮಾರ್ಗಗಳಿದ್ದುದರಿಂದ ಪ್ರಯಾಣಕ್ಕೆ ಅನುಕೂಲವಿತ್ತು.

ಈಗಲೂ ಸ್ತ್ರೀಯರಿಗೆ ವೇದಾಭ್ಯಾಸದ ಅಧಿಕಾರವಿತ್ತು. ಅವರು ಧಾರ್ಮಿಕ ಚರ್ಚೆಗಳಲ್ಲಿ ಪಂಡಿತರೊಂದಿಗೆ ಸರಿಸಮಾನರಾಗಿ ಭಾಗವಹಿಸುತ್ತಿದ್ದರು. ಪ್ರೌಢವಿವಾಹಗಳೇ ಈಗಲೂ ರೂಢಿಯಲ್ಲಿದ್ದವು. ರಾಜಕುಮಾರಿಯರಿಗೆ ಸ್ವಯಂವರಾಧಿಕಾರವಿತ್ತು.

---

೧. ಆನೆ, ಕುದುರೆ, ರಥ, ಕಾಲಾಳುಗಳು.

ಸಮಾಜದಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ನಾಲ್ಕು ಜಾತಿಗಳುಂಟಾದವು. ಹುಟ್ಟಿನಮೇಲಿಂದ ಜಾತಿ ನಿರ್ಣಯವಾಗಹತ್ತಿತು. ಜಾತಿನಿರ್ಬಂಧಗಳು ಬೆಳೆದವು. ಆದರೂ ಮೇಲ್ಜಾತಿಯ ಗಂಡಸು ಕೆಳಜಾತಿಯ ಹೆಂಗಸನ್ನು ವಿವಾಹವಾಗಬಹುದಿತ್ತು.

ಜನರು ಅನೇಕ ದೇವತೆಗಳನ್ನು ಪೂಜಿಸಹತ್ತಿದರು. ದ್ರಾವಿಡರ ಸಂಪರ್ಕದ ಫಲವಾಗಿ ಮೂರ್ತಿಪೂಜೆಯೂ ಆರಂಭವಾಯಿತು. ಬ್ರಹ್ಮ, ವಿಷ್ಣು, ಮಹೇಶ್ವರರು ಮುಖ್ಯ ದೇವತೆಗಳಾದರು. ಯಜ್ಞಯಾಗಾದಿಗಳ ಸಂಖ್ಯೆಯೂ ಬೆಳೆಯಿತು. ಕೊನೆಕೊನೆಗೆ, ಎಲ್ಲ ಚರಾಚರ ವಸ್ತುಗಳ ಸೃಷ್ಟಿಕರ್ತನೂ ಮತ್ತು ಉಳಿದೆಲ್ಲ ದೇವತೆಗಳಿಗೆ ಮಿಗಿಲಾದವನೂ ಆದ ಪರಮೇಶ್ವರನೊಬ್ಬ ನಿರುವನೆಂಬ ಭಾವನೆಯು ಸ್ಫುಟವಾಗಿ ಒಡಮೂಡಿತು.

ಒಟ್ಟಾರೆ, ಪುನರ್ಜನ್ಮ, ವಿಷ್ಣುವಿನ ಅವತಾರಗಳು, ಮೂರ್ತಿಪೂಜೆ ಇವುಗಳಲ್ಲಿ ಜನರ ವಿಶ್ವಾಸ, ಜಾತಿಗಳ ಹುಟ್ಟು-ಇವು ರಾಮಾಯಣ, ಮಹಾಭಾರತ ಕಾಲದ ಮುಖ್ಯ ಅಂಶಗಳೆಂದು ತಿಳಿಯಬಹುದು. ಆ ಕಾಲದಲ್ಲಿ, ರಾಜರ ಸ್ಥಾನಮಾನಗಳು ಬೆಳೆದವು. ಋಷಿಗಳ ಮತ್ತು ವಿದ್ವಾಂಸರ ಬಗೆಗೆ ಗೌರವವು ಹೆಚ್ಚಿತು. ಧಾರ್ಮಿಕ ಕರ್ಮಾಚರಣೆ, ಅರಣ್ಯವಾಸಗಳಲ್ಲಿ ಆಸ್ಥೆ ಇವು ಬಲಿಯಹತ್ತಿದವು. ಇದೇ ಕಾಲದಲ್ಲಿ ಪುರಾಣಗಳೆಂಬ ಗ್ರಂಥಗಳು[೧] ರಚಿತವಾದವು.

## ಅಭ್ಯಸನಗಳು

೧. ಸಂಭಾಷಣೆಗಾಗಿ:—

(ಅ) ಭರತ–ರಾಮರ ಭೆಟ್ಟಿ.
(ಆ) ಶ್ರೀರಾಮ–ಲವಕುಶರ ಭೆಟ್ಟಿ.
(ಇ) ಶ್ರೀಕೃಷ್ಣಸಂಧಾನ.
(ಈ) ಏಕಲವ್ಯನ ಬಿಲ್ಲುಗಾರಿಕೆ.

ರಾಮಾಯಣ–ಮಹಾಭಾರತ ಕಾಲಗಳಲ್ಲಿಯ ಮುಖ್ಯ ಉದ್ಯೋಗಗಳನ್ನು ಚಿತ್ರಿಸುವದು (ನೂಲುವದು, ಬಡಿಗತನ, ಕಮ್ಮಾರಿಕೆ, ಒಕ್ಕಲುತನ.)

---

೧. ಪುರಾಣಗಳು ಹದಿನೆಂಟು: ವಿಷ್ಣುಪುರಾಣ, ವಾಯುಪುರಾಣ ಮುಂತಾಗಿ.

## ೫ನೆಯ ಪ್ರಕರಣ



ಚಿತ್ರ ೧. ವರ್ಧಮಾನ ಮಹಾವೀರ



ಚಿತ್ರ ೨. ಜೈನ ದೇವಾಲಯ ('ಅಬೂ' ಪರ್ವತದಲ್ಲಿ)



 ಚಿತ್ರ ೩. ಗೌತಮನ ಬಾಲ್ಯದಲ್ಲಿಯ ವಿದ್ಯಾಭ್ಯಾಸ.




ಚಿತ್ರ ೪. ಗೌತಮನ ಸಂಸಾರತ್ಯಾಗ.



ಚಿತ್ರ ೫. ಮರದ ಕೆಳಗೆ ಧ್ಯಾನಸ್ಥನಾಗಿ ಕುಳಿತಿರುವ ಗೌತಮನು.

೫ನೆಯ ಪ್ರಕರಣ

## ಬುದ್ಧ ಮತ್ತು ಮಹಾವೀರ.

ಹಿಂದಿನ ಪ್ರಕರಣದಲ್ಲಿ ವಿವರಿಸಿದ ರಾಮಾಯಣ-ಮಹಾಭಾರತ ಕಾಲದಲ್ಲಿ ಬೆಳೆಯುತ್ತ ನಡೆದ ಯಜ್ಞಯಾಗಾದಿಗಳು ಬರಬರುತ್ತ ಮಿತಿಮೀರಿದವು. ದ್ವಿಜರು[೧] ಅವುಗಳ ನೆವದಿಂದ ಅಳತೆಗೆಟ್ಟು ಪ್ರಾಣಿ ಹಿಂಸೆಯನ್ನು ಮಾಡಹತ್ತಿದರು. ಇದರಿಂದ ಎಷ್ಟೋ ಜನರು ಬೇಸತ್ತರು. ಪ್ರಾಣಿಹಿಂಸೆಯನ್ನು ನೋಡುವದಾಗದೆ ದಯಾಳುಗಳ ಮನಸ್ಸು ಕೊರಗಿತು, ಹೃದಯವು ತಲ್ಲಣಿಸಿತು. ದೇವರ ಪ್ರೀತಿ, ಮೋಕ್ಷಪ್ರಾಪ್ತಿಗಳಿಗೆ ಇತರ ಮಾರ್ಗಗಳಿರಲಾರವೆ? ಎಂದು ಜನರು ಶಂಕಿಸತೊಡಗಿದರು. ಈ ಪರಿಸ್ಥಿತಿಯಲ್ಲಿ, ಭಾರತದಲ್ಲಿ ಇಬ್ಬರು ಪ್ರಖ್ಯಾತ ಧರ್ಮವೀರರಾಗಿಹೋದರು. ಅವರೇ ಗೌತಮ ಬುದ್ಧ ಮತ್ತು ವರ್ಧಮಾನ ಮಹಾವೀರರೆಂಬ ಮಹಾನುಭಾವರು. ಅವರು ಆಗಿಹೋದುದು ಕ್ರಿ. ಪೂ. ೬ನೆಯ ಶತಮಾನದಲ್ಲಿ.

(ಬುದ್ಧ ಮತ್ತು ಮಹಾವೀರರು ಸಮಕಾಲೀನರಾದರೂ ಮಹಾವೀರನು ಬುದ್ಧನಿಗಿಂತ ಕೆಲವು ವರುಷ ಮುಂಚಿತವಾಗಿ ಜನಿಸಿದವನಾದ್ದರಿಂದ, ಮೊದಲು ಅವನ ಬಗೆಗೆ ಕೆಳಗೆ ಕೊಡಲಾಗಿದೆ. )

### ವರ್ಧಮಾನ ಮಹಾವೀರ

**ಜೀವನಕಥೆ:—**

ಇವನು ವೈಶಾಲಿ[೨]ಯೆಂಬಲ್ಲಿ ಜನಿಸಿದನು. ಸಿದ್ಧಾರ್ಥನೆಂಬ ಕ್ಷತ್ರಿಯ ಸರದಾರನು ಇವನ ತಂದೆ. ತ್ರಿಶಲಾದೇವಿಯು ಇವನ ತಾಯಿ. ಅವಳು ಮಗಧ ದೇಶದ ರಾಜಮನೆತನಕ್ಕೆ ಸಂಬಂಧಿಸಿದ್ದಳು. ವರ್ಧಮಾನನು ಯಶೋದೆಯೆಂಬ ರಾಜಕನ್ಯೆಯನ್ನು ಲಗ್ನವಾದನು. ಕೆಲವು ವರುಷ ಗೃಹಸ್ಥಾಶ್ರಮದ ನಿಯಮಗಳಂತೆ ನಡೆದನು. ಆದರೆ ತನ್ನ ವಯಸ್ಸಿನ

೧. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಜಾತಿಯವರು

೨. ಈಗಿನ ಮುಜಫರಪುರವೆಂಬ ಜಿಲ್ಹೆಯಲ್ಲಿ (ಸಂಯುಕ್ತ ಪ್ರಾಂತದಲ್ಲಿ)

೩೦ನೆಯ ವರುಷದಲ್ಲಿ ಸಂಸಾರವನ್ನು ತ್ಯಜಿಸಿದನು; ಸಂನ್ಯಾಸಿಯಾದನು. ಮೊದಲು 'ಪಾರ್ಶ್ವನಾಥ' ಎಂಬವನನ್ನು ತನ್ನ ಗುರುವನ್ನಾಗಿ ಮಾಡಿಕೊಂಡನು. ಆದರೆ ಅವನ ಪಂಥವು ವರ್ಧಮಾನನಿಗೆ ಸರಿದೋರಲಿಲ್ಲ. ಆದ್ದರಿಂದ ೨ ವರುಷಗಳಾಗುತ್ತಲೆ ಅವನನ್ನು ಬಿಟ್ಟುಹೋದನು. ಅನಂತರ ವರ್ಧಮಾನನು ಬತ್ತಲೆಯ ಬೈರಾಗಿಯಾದನು. ಉತ್ತರ ಭಾರತದ ಪೂರ್ವ ಪ್ರದೇಶಗಳಲ್ಲಿ ಅಲೆಯುತ್ತ ಉಗ್ರತಪಸ್ಸು ಮಾಡಿದನು. ೧೨ ವರುಷಗಳ ಕೊನೆಗೆ ಅವನಿಗೆ ಜ್ಞಾನೋದಯವಾಯಿತು. ಆಗ ಅವನಿಗೆ 'ಕೇವಲಿ' (ಎಲ್ಲವನ್ನು ಬಲ್ಲವ), 'ಜಿನ' (ಇಂದ್ರಿಯಗಳನ್ನು ಗೆದ್ದವ) ಮತ್ತು 'ಮಹಾವೀರ' ಎಂದು ಹೆಸರುಗಳು ಉಂಟಾದವು (ಚಿತ್ರ ೧ ನೋಡಿರಿ). ಮುಂದೆ ೩೦ ವರುಷ ಅವನು ತನ್ನ ಧರ್ಮತತ್ತ್ವಗಳನ್ನು ಜನರಲ್ಲಿ ಬೀರುತ್ತ ಮಗಧ ಮತ್ತು ಅಂಗ ದೇಶಗಳಲ್ಲಿ ಸಂಚರಿಸಿದನು. ಎಷ್ಟೋ ಜನರು ಅವನ ಧರ್ಮವನ್ನು ಸ್ವೀಕರಿಸಿದರು. ಬರಬರುತ್ತ ಅವನ ಅನುಯಾಯಿಗಳ ಸಂಖ್ಯೆ ಬೆಳೆಯಿತು. ತನ್ನ ವಯಸ್ಸಿನ ೭೨ನೆಯ ವರುಷದಲ್ಲಿ ಅವನು ದಕ್ಷಿಣ ಬಿಹಾರದ ಪಾವಾ ಎಂಬಲ್ಲಿ ದೇಹವಿಟ್ಟನು.[೧]

## ಜೈನರು ಮತ್ತು ಜೈನ ಧರ್ಮದ ಪ್ರಸಾರ:—

ಮಹಾವೀರನ ಅನುಯಾಯಿಗಳಿಗೆ ಜೈನರೆಂಬ ಹೆಸರು. ಜೈನ ಧರ್ಮವು ತನ್ನ ಏರಿಕೆಯ ಕಾಲಕ್ಕೆ ಮೊದಲು ಉತ್ತರ ಭಾರತದ ಕೋಸಲ, ವಿದೇಹ, ಮಗಧ ಮತ್ತು ಅಂಗ ರಾಜ್ಯಗಳಲ್ಲಿ ಹಬ್ಬಿತ್ತು. ಮುಂದೆ ಕ್ರಿ. ಪೂ. ೩ನೆಯ ಶತಮಾನದಲ್ಲಿ ದಕ್ಷಿಣ ಭಾರತದ ಪಾಂಡ್ಯ, ಚೋಳ ಮುಂತಾದ ರಾಜ್ಯಗಳಲ್ಲಿಯೂ ಜೈನ ಧರ್ಮವು ಪ್ರಸಾರವಾಯಿತೆಂದು ಹೇಳಲಾಗುತ್ತದೆ (ಚಿತ್ರ ೨ ನೋಡಿರಿ).

ಜೈನರ ಅಭಿಪ್ರಾಯದ ಮೇರೆಗೆ, ಮಹಾವೀರನು ಹೊಸ ಧರ್ಮಸಂಸ್ಥಾಪಕನಲ್ಲ. ಏಕೆಂದರೆ ಆ ಧರ್ಮವು ತೀರ ಹಳೆಯದು. ಮಹಾವೀರನು ತೀರ್ಥಂಕರರೆಂಬವರಲ್ಲಿ ಒಬ್ಬನು. ತೀರ್ಥಂಕರರ ಒಟ್ಟು ಸಂಖ್ಯೆ, ೨೪. ಇವರಲ್ಲಿ 'ವೃಷಭರಾಜ' ಎಂಬವನು ಮೊದಲನೆಯವನು. ಪಾರ್ಶ್ವನಾಥನು ೨೩ನೆಯವನು.

---

೧. ಜನನ, ಕ್ರಿ. ಪೂ. ೫೯೯ ರಲ್ಲಿ; ಮರಣ, ಕ್ರಿ. ಪೂ. ೫೨೭ ರಲ್ಲಿ.

ಮಹಾವೀರನೇ ಕೊನೆಯುವನು. ಮೊದಮೊದಲಿನ ತೀರ್ಥಂಕರರು ಶ್ರೀರಾಮ, ಕೃಷ್ಣರ ಕಾಲದಲ್ಲಿ ಜೀವಿಸಿದರೆಂದು ಜೈನರು ತಿಳಿಯುವರು.

**ಜೈನಮತದ ತತ್ತ್ವಗಳು :—**

ವೇದಗಳು ಅಪೌರುಷೇಯುವಲ್ಲ. ಯಜ್ಞಯಾಗಾದಿಗಳಿಂದ ಮೋಕ್ಷ ದೊರೆಯದು. ಮೂರ್ತಿಪೂಜೆ ಉಚಿತವಲ್ಲ. ಜಾತಿಗಳಲ್ಲಿ ಮೇಲು, ಕೀಳು ಎಂಬ ಭಾವನೆ ಯೋಗ್ಯವಲ್ಲ. 'ಜಿನ'ನಾಗಬೇಕಾದರೆ ಮನುಷ್ಯನು ತನ್ನ ದೇಹವನ್ನು ಉಪವಾಸಾದಿಗಳನ್ನು ಮಾಡಿ ಸವೆಸಬೇಕು. ಅಹಿಂಸೆಯೆ ಜೈನ ಧರ್ಮದ ಮುಖ್ಯ ಉಪದೇಶ. ಜೀವವು ಮನುಷ್ಯ, ಪಶು, ಪಕ್ಷಿಗಳಲ್ಲಿ ಮಾತ್ರ ವಲ್ಲದೆ, ಜಲ, ಸಸ್ಯ ಮುಂತಾದವುಗಳಲ್ಲಿಯೂ ಇರುವದೆಂದು ಜೈನರ ಭಾವನೆ.

**ಜೈನಧರ್ಮದ ಉಪದೇಶ :—**

ಜೈನಧರ್ಮದ ಅನುಯಾಯಿಗಳು ತೆಗೆದುಕೊಳ್ಳಬೇಕಾದ ಐದು ಮಹತ್ತ್ವದ ಪ್ರತಿಜ್ಞೆಗಳು ಕೆಳಗಿನಂತಿರುವವು :— ೧. ಸತ್ಯ ( ಯಾವಾಗಲೂ ನಿಜವನ್ನೆ ನುಡಿಯಬೇಕು. ) ೨. ಅಹಿಂಸೆ ( ಎಂದೂ ಹಿಂಸೆ ಮಾಡಬಾರದು. ) ೩. ಅಸ್ತೇಯ ( ಎಂದೂ ಕಳವು ಮಾಡಬಾರದು. ) ೪. ಅನಾಸಕ್ತಿ ( ಐಹಿಕ ಸುಖೋಪಭೋಗಗಳಿಗೆ ಅಂಟಿಕೊಳ್ಳಬಾರದು. ) ೫. ಬ್ರಹ್ಮಚರ್ಯ ( ಜೀವನದಲ್ಲಿಯೂ ಸ್ವಭಾವದಲ್ಲಿಯೂ ಬ್ರಹ್ಮಚಾರಿಯಾಗಿರುವದು. )

**ಸಾರಾಂಶ** :–ಪಾಪವೆಂದೆನಿಸುವ ಯಾವದೇ ಬಗೆಯ ಆಚಾರವಿಚಾರಗಳಲ್ಲಿ ತೊಡಗದೆ, ಜಿನ ಮತ್ತು ಅವನ ಉಪದೇಶಗಳಲ್ಲಿ ದೃಢ ವಿಶ್ವಾಸವಿಟ್ಟು ಒಳ್ಳೇ ನಡತೆಯಿಂದ ಜೀವನದಲ್ಲಿ ನಡೆಯುವದೇ ಮನುಷ್ಯನಿಗೆ ಕೈವಲ್ಯ ( ಮೋಕ್ಷ) ಪ್ರಾಪ್ತಿಯ ಮಾರ್ಗ.

ಕೆಲವು ಕಾಲದ ಮೇಲೆ ಜೈನ ಧರ್ಮದಲ್ಲಿ ದಿಗಂಬರ[೧] ಮತ್ತು ಶ್ವೇತಾಂಬರ[೨] ಎಂಬ ಪಂಗಡಗಳು ಉಂಟಾದವು.

ಜೈನಧರ್ಮದಲ್ಲಿ ಅಹಿಂಸೆ ಮತ್ತು ಸಂನ್ಯಾಸವೃತ್ತಿಗಳ ಅತಿರೇಕವಾದುದರಿಂದ ಆ ಧರ್ಮವು ಸಾಮಾನ್ಯವಾಗಿ ಭಾರತದ ಆಚೆಗೆ ಪ್ರಸಾರವಾಗಲಿಲ್ಲ. ಆದರೆ ಭಾರತದಲ್ಲಿ ಮಾತ್ರ ಅದು ಈಗಲೂ ಶಾಶ್ವತವಾಗಿ ಉಳಿದಿದೆ.

---

೧. ಮೈಮೇಲೆ ಬಟ್ಟೆ ಹಾಕಿಕೊಳ್ಳದವರು

೨. ಮೈಮೇಲೆ ಬಿಳಿಯ ಬಟ್ಟೆಗಳನ್ನಷ್ಟೆ ಹಾಕಿಕೊಳ್ಳುವವರು

## ಗೌತಮ ಬುದ್ಧ

**ಜೀವನಕಥೆ :—**

ಬುದ್ಧನು ಮಹಾವೀರನ ಸಮಕಾಲೀನನು. ಅವನು ನೇಪಾಳ ದೇಶ ದಲ್ಲಿಯ ಕಪಿಲವಸ್ತು ಎಂಬ ನಗರಕ್ಕೆ ಸಮೀಪದಲ್ಲಿದ್ದ ಲುಂಬಿಣಿ ಗ್ರಾಮದಲ್ಲಿ ಜನಿಸಿದನು. ಅವನ ಚಿಕ್ಕಂದಿನ ಹೆಸರು ಸಿದ್ಧಾರ್ಥ. ಅವನ ತಂದೆ ಶುದ್ಧೋದನ. ಅವನು ( ಶುದ್ಧೋದನನು ) ಕಪಿಲವಸ್ತುವಿನ ಶಾಕ್ಯ ಕುಲದ ಅರಸನಿದ್ದನು. ಗೌತಮ ಗೋತ್ರದವನಾದ್ದರಿಂದ ಸಿದ್ಧಾರ್ಥನಿಗೆ ಗೌತಮನೆಂಬ ಹೆಸರೂ ರೂಢಿಯಲ್ಲಿ ಬಂದಿತು. ಗೌತಮನ ತಾಯಿ ಮಾಯಾದೇವಿ. ಈಕೆಯು ಗೌತಮನು ಹುಟ್ಟಿದ ಕೆಲವೇ ದಿನಗಳಲ್ಲಿ ಮರಣ ಹೊಂದಿದಳು. ಆದ್ದರಿಂದ ಅವನನ್ನು ಮಲತಾಯಿಯಾದ ಗೌತಮೀ ಎಂಬವಳು ಜೋಪಾನ ಮಾಡಿ ದಳು. ಗೌತಮನ ಬಾಲ್ಯದಲ್ಲಿಯ ವಿದ್ಯಾಭ್ಯಾಸಗಳು ಅರಮನೆಯಲ್ಲಿಯೇ ನಡೆದವು. ಅವನು ಬ್ರಾಹ್ಮಣ ಗುರುವಿನಿಂದ ವಿದ್ಯೆ ಕಲಿತನು. ಆಗಿನ ಕಾಲದ ಅರಸುಮಕ್ಕಳಿಗೆ ಬೇಕಾಗುತ್ತಿದ್ದ ಧನುರ್ವಿದ್ಯೆ, ಸಂಗೀತಶಾಸ್ತ್ರ ಗಳಲ್ಲಿಯೂ ಗೌತಮನಿಗೆ ಶಿಕ್ಷಣ ದೊರೆಯಿತು ( ಚಿತ್ರ ೩ ನೋಡಿರಿ ). ೧೬ ವರುಷ ವಯಸ್ಸಿನವನಾದಕೂಡಲೆ, ಯಶೋಧರೆಯೆಂಬ ಆಪ್ತ ಕನ್ಯೆ ಯೊಂದಿಗೆ ಅವನ ಮದುವೆಯಾಯಿತು.

ಗೌತಮನು ಯಾವಾಗಲೂ ಅರಮನೆಯ ಸುಖ ಸಾಮ್ರಾಜ್ಯದಲ್ಲಿ ಕಾಲ ಕಳೆಯುತ್ತಿದ್ದುದು ನಿಜ. ಆದರೆ ಅವನ ಮನಸ್ಸು ಮಾತ್ರ ಮೊದ ಲಿನಿಂದಲೂ ಐಹಿಕ ಸುಖೋಪಭೋಗಗಳ ಕಡೆಗೆ ಹರಿಯಲಿಲ್ಲ. ಅದು ಯಾವಾಗಲೂ ಪಾರಮಾರ್ಥಿಕ ( ದೈವಿಕ ) ವಿಚಾರಗಳಲ್ಲಿಯೆ ತೊಡಗಿರು ತ್ತಿತ್ತು. ಒಮ್ಮೆ ಅವನು ತನ್ನ ಕನಸಿನಲ್ಲಿ ಒಬ್ಬ ಅತಿ ಹಣ್ಣಾದ ಮುದುಕ ನನ್ನೂ, ಅತಿ ಬಳಲುತ್ತಿದ್ದ ಒಬ್ಬ ಬೇನೆಯವನನ್ನೂ ಮತ್ತು ಮನುಷ್ಯನ ಒಂದು ಹೆಣವನ್ನೂ ಕಂಡನು.[೧] " ಗೌತಮಾ, ನೀನೂ ಒಮ್ಮಿಲ್ಲೊಮ್ಮೆ ಹೀಗೇ ಆಗುವಿ, " ಎಂದು ಅವರು ಅಂದಂತೆ ಅವನಿಗೆ ಭಾಸವಾಯಿತು. ಅಂದಿನಿಂದ ಅವನು ಸಂಸಾರವನ್ನು ಬಿಟ್ಟುಬಿಡುವ ವಿಚಾರದಲ್ಲಿದ್ದನು.

---

೧. ಗೌತಮನಿಗೆ ಈ ದೃಶ್ಯಗಳು ಪ್ರತ್ಯಕ್ಷವಾಗಿ ಕಣ್ಣಿಗೆಬಿದ್ದವೆಂದು ಕೆಲವರ ಹೇಳಿಕೆ.

ಹೀಗಿರುವಾಗ ಅವನಿಗೆ 'ರಾಹುಲ' ಎಂಬ ಗಂಡುಮಗನು ಜನಿಸಿದನು. ಅರಮನೆಯಲ್ಲಿ ಆನಂದವೇ ಆನಂದ! ಆದರೆ ಗೌತಮನಿಗೆ ಮಾತ್ರ ಇದೊಂದು ಕಿತ್ತೊಗೆಯಬೇಕಾದ ಹೊಸ ಬಂಧನವೆನಿಸಿತು. ಆದ್ದರಿಂದ ಅದೇ ರಾತ್ರಿ ಅವನು ತನ್ನ ಹೆಂಡತಿಯ ಮತ್ತು ಮಗುವಿನ ಮೊಗಗಳನ್ನು ಕೊನೆಯದಾಗಿ ನೋಡಿದನು. ಮಗುವನ್ನು ಮುದ್ದಿಡಬೇಕೆಂದು ಉಕ್ಕಿ ಬಂದ ಮೋಹವನ್ನು ಹತ್ತಿಕ್ಕಿ ಅರಮನೆಯಿಂದ ಹೊರಹೊರಟನು (ಚಿತ್ರ ೪ ನೋಡಿರಿ). ರಥದಲ್ಲಿ ಕುಳಿತು ಸಾರಥಿಯೊಂದಿಗೆ ಗೌಪ್ಯವಾಗಿ ಊರನ್ನು ದಾಟಿದನು. ಒಂದು ನದಿಯ ಬಳಿಯಲ್ಲಿ ಮುಂಡನ ಮಾಡಿಕೊಂಡು ಸಂನ್ಯಾಸಿಯ ಬಟ್ಟೆಗಳನ್ನು ಹಾಕಿಕೊಂಡು ತಾನೊಬ್ಬನೆ ಮುಂದೆ ಸಾಗಿದನು.

ಮೊದಲಿಗೆ ವೈಶಾಲಿಯಲ್ಲಿ ಒಬ್ಬ ಬ್ರಾಹ್ಮಣನಲ್ಲಿ[೧] ವೈದಿಕ ಮತದ ತತ್ತ್ವಗಳನ್ನು ಅಧ್ಯಯನ ಮಾಡಿದನು. ಆದರೆ ಗೌತಮನಿಗೆ ಇದರಿಂದ ಸಮಾಧಾನವಾಗಲಿಲ್ಲ. ರಾಜಗೃಹ[೨] ಎಂಬಲ್ಲಿ ಒಬ್ಬ ಯತಿಯ[೩] ಬಳಿಯಲ್ಲಿ ಆತ್ಮಜ್ಞಾನವನ್ನು ಕುರಿತು ಅಧ್ಯಯನ ಮಾಡಿದನು. ಇದರಿಂದಲೂ ಸಮಾಧಾನವೆನಿಸಲಿಲ್ಲ. ಬಳಿಕ ಗಯೆಯ ಸಮೀಪದ ಉರವಲವೆಂಬ ಕಾಡಿನಲ್ಲಿ ಆರು ವರುಷ ಉಗ್ರ ತಪಸ್ಸನ್ನಾಚರಿಸಿದನು. ಇದರಿಂದ ಗೌತಮನ ದೇಹ ಸವೆಯಿತು. ಆದರೆ ಜ್ಞಾನೋದಯ ಮಾತ್ರ ಆಗಲಿಲ್ಲ. ಆಗ ವೇದಾಭ್ಯಾಸ ಮತ್ತು ಉಗ್ರ ತಪಗಳಲ್ಲಿ ಹುರುಳಿಲ್ಲವೆಂದು ಅವನಿಗೆ ಅರಿಕೆಯಾಯಿತು. ಕೊನೆಗೆ ಅವನು ಅಲ್ಲಿಯ ನಿರಂಜನವೆಂಬ ನದಿಯಲ್ಲಿ ಸ್ನಾನಮಾಡಿ ಸಮೀಪದ ಅರಳೆಯ ಮರವೊಂದರ ಕೆಳಗೆ ಧ್ಯಾನಸ್ಥನಾಗಿ ಕುಳಿತನು (ಚಿತ್ರ ೫ ನೋಡಿರಿ). ಆಗ ಒಮ್ಮೆ ಅವನಿಗೆ ತಟ್ಟನೆ ಜ್ಞಾನೋದಯವಾಯಿತು. ಅವನು ನಿದ್ರೆಯಿಂದ ಎಚ್ಚತ್ತವನಂತಾದನು. ಆದ್ದರಿಂದ ಅವನಿಗೆ 'ಬುದ್ಧ' (ಎಚ್ಚತ್ತವ ಅಥವಾ ನಿಜವಾದ ಅರಿವು ಉಂಟಾದವ) 'ತಥಾಗತ' (ಸತ್ಯವನ್ನು ಸಂಪಾದಿಸಿದವ) ಮತ್ತು 'ಶಾಕ್ಯಮುನಿ' ಎಂಬ ಬೇರೆ ಬೇರೆ ಹೆಸರು

---

೧. "ಆಲಾರ ಕಾಲಾಮ" ಎಂಬವನಲ್ಲಿ.

೨. ಈಗಿನ ಪಾಟ್ನಾದಿಂದ ೭೫-೮೦ ಮೈಲು ದೂರದಲ್ಲಿತ್ತು.

೩. "ಉದ್ರಕ" ಎಂಬವನು.

ಗಳುಂಟಾದವು. ಅವನು ಕುಳಿತ ಮರವನ್ನು ಬೋಧಿವೃಕ್ಷವೆಂದು ಕರೆಯ ಲಾಯಿತು. ಅಲ್ಲಿಂದ ಬುದ್ಧನು ಕಾಶಿಗೆ ತೆರಳಿ ತನ್ನ ತತ್ತ್ವಗಳನ್ನು ಉಪದೇಶ ಮಾಡತೊಡಗಿದನು. ೪೫ ವರುಷಗಳ ವರೆಗೆ ಧರ್ಮೋಪದೇಶಕನಾಗಿ ರಾಜರಿಗೂ ಜನಸಾಮಾನ್ಯರಿಗೂ ತತ್ತ್ವೋಪದೇಶ ಮಾಡಿದನು. ಈ ಅವಧಿಯಲ್ಲಿ ಅವನು ಅಯೋಧ್ಯೆ, ಬಿಹಾರ ಮತ್ತು ಅವುಗಳ ಸುತ್ತಲಿನ ಪ್ರದೇಶಗಳಲ್ಲಿ ಸಂಚಾರ ಮಾಡಿದನು. ಎಲ್ಲೆಲ್ಲಿಯೂ ಅವನಿಗೆ ಲೆಕ್ಕವಿಲ್ಲದಷ್ಟು ಅನುಯಾಯಿಗಳು ದೊರೆ ತರು. ಮುಂದೆ ಕಪಿಲವಸ್ತುವಿಗೆ ಹೋದಾಗ ಅವನ ಹೆಂಡತಿಯೂ ಮಗನೂ ಅವನ ಧರ್ಮವನ್ನು ಸ್ವೀಕರಿಸಿದರು. ಬುದ್ಧನು ತನ್ನ ವಯಸ್ಸಿನ ೮೦ನೆಯ ವರುಷದಲ್ಲಿ ಕುಶೀನಗರ[೧] ಎಂಬಲ್ಲಿ ದೇಹವಿಟ್ಟನು.[೨]

## ಬೌದ್ಧರು ಮತ್ತು ಬೌದ್ಧ ಧರ್ಮದ ಪ್ರಸಾರ:—

ಬುದ್ಧನು ಉಪದೇಶಿಸಿದ ಧರ್ಮಕ್ಕೆ ಬೌದ್ಧಧರ್ಮವೆಂದೂ ಅವನ ಅನು ಯಾಯಿಗಳಿಗೆ ಬೌದ್ಧರೆಂದೂ ಹೆಸರು. ಧರ್ಮಪ್ರಸಾರಕ್ಕಾಗಿ ಅವನು ಸಂಘ ಗಳನ್ನೂ ವಿಹಾರಗಳನ್ನೂ (ಸಂನ್ಯಾಸಿ–ಮಠಗಳನ್ನೂ) ಸ್ಥಾಪಿಸಿದನು. ಗಂಡ ಸರೂ ಹೆಂಗಸರೂ ಸಂನ್ಯಾಸಿಗಳಾಗಬಹುದಿತ್ತು. ಅವರನ್ನು 'ಭಿಕ್ಷು'ಗಳೆಂದು ಕರೆಯಲಾಗುತ್ತಿತ್ತು. ಅವರು ಪರದೇಶಗಳಿಗೂ ಹೋಗಿ ಧರ್ಮಪ್ರಸಾರ ಮಾಡಿದರು. ಕಾಲವು ಗತಿಸಿದಂತೆ, ಈ ಧರ್ಮವು ಚೀನ, ತಿಬೇಟ, ಬ್ರಹ್ಮದೇಶ, ಸಿಂಹಳದ್ವೀಪ, ಸಯಾಮು, ಜಪಾನ ಮುಂತಾದ ಪರದೇಶಗಳಲ್ಲಿ ಹಬ್ಬಿ ಈಗಲೂ ಅಲ್ಲಿ ಉಳಿದಿರುವದು. ಆದರೆ ಭಾರತದಲ್ಲಿ ಮಾತ್ರ ಅದು ವಿಶೇಷ ವಾಗಿ ಕಂಡುಬರುವದಿಲ್ಲ.

## ಬೌದ್ಧಧರ್ಮದ ತತ್ತ್ವಗಳು:—

ವೈದಿಕ ಧರ್ಮದ ಬಗೆಗೆ ಬೌದ್ಧರ ವಿಚಾರಗಳಾದರೂ ಬಹುಮಟ್ಟಿಗೆ ಜೈನರ ವಿಚಾರಗಳಂತೆಯೇ ಇರುವವು.

ಜೀವನವು ದುಃಖಮಯವಾದುದು. ಆಶೆಯೇ ದುಃಖಗಳಿಗೆ ಮೂಲ ಕಾರಣ. ಆಶೆಯ ಬೀಜವನ್ನು ಕಿತ್ತೊಗೆಯುವದೆ ದುಃಖನಿವಾರಣೆಗೆ ಶ್ರೇಷ್ಠ

---

೧. ಈಗಿನ ಸಂಯುಕ್ತ ಪ್ರಾಂತದ ಗೋರಖಪುರ ಜಿಲ್ಲೆಯಲ್ಲಿ.

೨. ಜನನ, ಕ್ರಿ. ಪೂ. ೫೬೬ ರಲ್ಲಿ; ಮರಣ, ಕ್ರಿ. ಪೂ, ೪೮೬ರಲ್ಲಿ.

ಉಪಾಯ. 'ನಿರ್ವಾಣ' (ಅಂತಿಮ ಶಾಂತಿ) ದೊರೆಯಲಿಕ್ಕೆ 'ಅಷ್ಟವಿಧ[೧] ಮಾರ್ಗ' ವನ್ನು ಅನುಸರಿಸಬೇಕು. ಅಥವಾ ನಿರ್ವಾಣಪ್ರಾಪ್ತಿಯ ಮಾರ್ಗವು ಕೆಳಗಿನಂತಿರುವದು:—

ಶೀಲ→ಸಮಾಧಿ→ಪ್ರಜ್ಞೆ→ಸಂಬೋಧಿ→ನಿರ್ವಾಣ.

(ಶೀಲ, ಮೇಲ್ತರದ ನೈತಿಕ ನಡಾವಳಿ–ಅಸತ್ಯ, ಕಳವು, ವಧೆ, ಹಣಕ್ಕಾಗಿ ಅತ್ಯಾಶೆ ಮುಂತಾದವುಗಳನ್ನು ಬಿಡುವದು; ಸಮಾಧಿ, ಸಂನ್ಯಾಸವೃತ್ತಿ; ಪ್ರಜ್ಞೆ, ತಾತ್ತ್ವಿಕ ವಿಷಯಗಳ ಚಿಂತನೆಯಲ್ಲಿ ತೊಡಗಿರುವದು; ಸಂಬೋಧಿ, ದಿವ್ಯಜ್ಞಾನಿಯಾಗಿರುವದು.)

**ಬುದ್ಧನ ಉಪದೇಶಗಳು:**

ಬುದ್ಧ, ಧರ್ಮ ಮತ್ತು ಸಂಘಗಳಲ್ಲಿ ದೃಢವಾದ ವಿಶ್ವಾಸವನ್ನಿಡಬೇಕು. ಅತಿಸುಖ, ಅತಿ ವೈರಾಗ್ಯಗಳೆರಡನ್ನೂ ಬಿಟ್ಟು ಮಧ್ಯಮಾರ್ಗವನ್ನು ಅನುಸರಿಸಬೇಕು. ದ್ವೇಷಕ್ಕೆ ಪ್ರತಿಯಾಗಿ ಪ್ರೀತಿ, ಅಪಕಾರಕ್ಕೆ ಪ್ರತಿಯಾಗಿ ಉಪಕಾರ, ಕೆಡಕಿಗೆ ಪ್ರತಿಯಾಗಿ ಒಳಿತು, ಅಸತ್ಯಕ್ಕೆ ಪ್ರತಿಯಾಗಿ ಸತ್ಯ ಮುಂತಾದವು ಬುದ್ಧನ ನೈತಿಕ ಕಟ್ಟಳೆಗಳು.

**ಸಾರಾಂಶ:**— ಬುದ್ಧನ ಹೇಳಿಕೆಯಮೇರೆಗೆ, ಉಚ್ಚ ಶೀಲವಂತನಾಗಿ ಸಂನ್ಯಾಸವೃತ್ತಿಯಿಂದ ತಾತ್ತ್ವಿಕ ವಿಷಯಗಳ ಚಿಂತನೆಯಲ್ಲಿ ಮನುಷ್ಯನು ಕಾಲ ಕಳೆಯಬೇಕು. ಶುದ್ಧ ಜೀವನವೇ ಬೌದ್ಧ ಧರ್ಮದ ಮುಖ್ಯ ಉಪದೇಶ.

## ಅಭ್ಯಸನಗಳು

೧. ಕೆಳಗಿನ ವಾಕ್ಯಗಳಲ್ಲಿ ತೆರವಿರುವ ಸ್ಥಳಗಳನ್ನು ಯೋಗ್ಯ ಶಬ್ದಗಳಿಂದ ತುಂಬಿರಿ:—

(ಅ) ವರ್ಧಮಾನ ಮಹಾವೀರನು............ಯಲ್ಲಿ ಜನಿಸಿದನು.

(ಆ) ............ಯೇ ಜೈನಧರ್ಮದ ಮುಖ್ಯ ಉಪದೇಶ.

---

[೧] ೧. ಸದವಲೋಕನ (ಯೋಗ್ಯದೃಷ್ಟಿ.) ೨. ಸತ್ಕಾಂಕ್ಷೆ. ೩. ಸದುಕ್ತಿ. ೪. ಸದ್ವರ್ತನ. ೫. ಸಜ್ಜೀವನೋಪಾಯ (ಹೊಟ್ಟೆಪಾಡಿನ ಯೋಗ್ಯಮಾರ್ಗ) ೬. ಸತ್ಪ್ರಯತ್ನ. ೭. ಸದವಧಾನ (ಯೋಗ್ಯ ಲಕ್ಷ್ಯ). ೮. ಸಚ್ಚಿಂತನ (ಯೋಗ್ಯಧ್ಯಾನ).

(ಇ) ಬುದ್ಧನು............ಎಂಬಲ್ಲಿ ದೇಹವಿಟ್ಟನು.

(ಈ) ಬೌದ್ಧ ಸಂನ್ಯಾಸಿಗಳಿಗೆ...........ಗಳೆಂದು ಹೆಸರು.

೨. ಕೆಳಗೆ ಕೊಟ್ಟವುಗಳಲ್ಲಿ, ಪ್ರತಿಯೊಂದರ ಬಗ್ಗೆ ಒಂದೊಂದು ವಾಕ್ಯ ಬರೆಯಿರಿ:—

(ಅ) ಕಪಿಲವಸ್ತು (ಆ) ಕೈವಲ್ಯ (ಇ) ದಿಗಂಬರ (ಈ) ಪಾರ್ಶ್ವನಾಥ.

೩. ಏಶಿಯಾ ಖಂಡದ ನಕಾಶೆಯಲ್ಲಿ ಬೌದ್ಧ ಧರ್ಮವು ಪ್ರಸಾರವಾದ ದೇಶಗಳನ್ನು ಗುರುತಿಸಿರಿ.



## ೬ನೆಯ ಪ್ರಕರಣ



ಚಿತ್ರ ೧. ಅಲೆಗ್ಝಾಂಡರ (ಸಿಕಂದರ)




ಚಿತ್ರ ೨. ಸಿಕಂದರನ ದಾಳಿ ಮತ್ತು ಅವನು ಅದಕ್ಕಾಗಿ ಬಂದುಹೋದ ಮಾರ್ಗ



ಚಿತ್ರ ೩. ಪೋರಸ-ಸಿಕಂದರರ ಕಾಳಗ—ಪೋರಸನ ಸೈನ್ಯರಚನೆ ಮತ್ತು ಸಿಕಂದರನ ಅಭಿಯೋಗ.



ಚಿತ್ರ ೪. ಸಿಕಂದರ-ಪೋರಸರ ಭೆಟ್ಟಿ.

# ೬ನೆಯ ಪ್ರಕರಣ

## ಘನವಂತನಾದ ಅಲೆಗ್ಝಾಂಡರ (ಸಿಕಂದರ)

**ಪೂರ್ವಪರಿಚಯ:**—ಅಲೆಗ್ಝಾಂಡರನು ಗ್ರೀಸದೇಶದ ಉತ್ತರಕ್ಕಿದ್ದ ಮೆಸಿಡೋನ ಪ್ರಾಂತದ 'ಫಿಲಿಪ್' ಎಂಬ ಅರಸನ ಮಗ. ಫಿಲಿಪ್ಪನು ಬಹು ಗಟ್ಟಿಗನಾದ ಅರಸನು. ಪಟ್ಟವೇರಿದ ೨೦ ವರುಷಗಳಲ್ಲಿ ಇಡೀ ಗ್ರೀಸದೇಶವನ್ನು ಅವನು ತನ್ನ ಕೈವಶಮಾಡಿಕೊಂಡನು. ಅವನು ಬಹು ಮಹತ್ತ್ವಾಕಾಂಕ್ಷಿ. ಗ್ರೀಸದ ಮುಂದಾಳಾಗಿ ಏಶಿಯಾ ಖಂಡವನ್ನೇ ಗೆಲ್ಲಲು ಎಲ್ಲ ಸಿದ್ಧತೆಯನ್ನು ಮಾಡಿದನು. ಆದರೆ ಕೊನೆಗಳಿಗೆಯಲ್ಲಿ ಕೊಲೆಗಡಕನೊಬ್ಬನು ಅವನನ್ನು ಕೊಂದನು. ಕೂಡಲೇ[1] ಹತ್ತೊಂಬತ್ತೇ ವರುಷ ವಯಸ್ಸಿನ ತರುಣ ಅಲೆಗ್ಝಾಂಡರನು ತಂದೆಯ ಪಟ್ಟವನ್ನೇರಿ, ರಾಜ್ಯಸೂತ್ರಗಳನ್ನು ವಹಿಸಿದನು ( ಚಿತ್ರ ೧ ನೋಡಿರಿ ). ಅವನು ಶೌರ್ಯ, ಧೈರ್ಯ, ಸಾಹಸ, ಚಾತುರ್ಯಗಳಲ್ಲಿ ತಂದೆಗಿಂತಲೂ ಮಿಗಿಲಾದವನು. ಏಶಿಯಾ ಖಂಡವನ್ನು ಗೆಲ್ಲಬೇಕೆಂದಿದ್ದ ತನ್ನ ತಂದೆಯ ಕನಸನ್ನು ನನಸಾಗಿ ಮಾಡಲು ನಿರ್ಧಾರಮಾಡಿದನು. ಅದೇಕೆ? ಇಡೀ ಜಗತ್ತನ್ನು ಗೆಲ್ಲುವ ಸಂಕಲ್ಪ ಮಾಡಿದನು ! ಮೊದಲಿಗೆ ತನ್ನ ತಂದೆಯ ಅನಿರೀಕ್ಷಿತ ಮರಣದಿಂದ ರಾಜ್ಯದಲ್ಲಿ ಅಲ್ಲಲ್ಲಿ ತಲೆದೋರಹತ್ತಿದ್ದ ದಂಗೆಗಳನ್ನು ಸದೆಬಡಿದನು. ಎರಡೇ ವರುಷಗಳಲ್ಲಿ ತನ್ನ ಸ್ಥಾನಮಾನಗಳನ್ನು ಭದ್ರಪಡಿಸಿಕೊಂಡನು. ಬಳಿಕ[2] ದಾಳಿಗಾಗಿ ದೊಡ್ಡ ಸುಸಜ್ಜಿತ ಸೈನ್ಯದೊಂದಿಗೆ ತನ್ನ ರಾಜ್ಯದಿಂದ ಹೊರ ಹೊರಟನು. ಏಳು ವರುಷಗಳ ಅವಧಿಯಲ್ಲಿ ಅವನು ಏಶಿಯಾಖಂಡದಲ್ಲಿಯ ಪಾರಸೀಕ ಸಾಮ್ರಾಜ್ಯವನ್ನು ಜಯಿಸಿದನು. ಆಫ್ರಿಕೆಯಲ್ಲಿಯ ಇಜಿಪ್ತ ದೇಶವನ್ನು ಹೊಕ್ಕು ಅಲ್ಲಿಯ ಪಾರಸೀಕರ ಆಡಳಿತೆಯನ್ನು ಕಿತ್ತೊಗೆದು ಅದನ್ನು ತನ್ನ ಕೈವಶಮಾಡಿಕೊಂಡನು. ಏಶಿಯಾದಲ್ಲಿ ಪಾರಸೀಕ ಸಾಮ್ರಾ-

---

೧. ಕ್ರಿ. ಪೂ. ೩೩೬ರಲ್ಲಿ.

೨. ಕ್ರಿ. ಪೂ. ೩೩೪ ರಲ್ಲಿ.

ಜ್ಯದ ಪೂರ್ವದಿಕ್ಕಿನ ಗಡಿಯನ್ನು ದಾಟಿ ಮುಂದೆ ಸಾಗಿದನು. ಪಶ್ಚಿಮ ತುರ್ಕಸ್ಥಾನದವರೆಗೂ ಹೋಗಿ ಹಿರಾತ, ಕಾಬೂಲ, ಖೈಬರ ಘಟ್ಟಗಳ ಮಾರ್ಗವಾಗಿ ಭಾರತದೊಳಗೆ ಕಾಲಿಟ್ಟನು. ವಾಯುವ್ಯಭಾರತದಲ್ಲಿ ಹಿಂದಕ್ಕೊಮ್ಮೆ ಪಾರಸೀಕರ ಪ್ರಭುತ್ವದಲ್ಲಿದ್ದ ಪ್ರದೇಶಗಳನ್ನು ತಾನು ಪಡೆಯುವದೇ ಅಲೆಗ್ಝಾಂಡರನ ಉದ್ದೇಶವಿತ್ತು.

ಅಲೆಗ್ಝಾಂಡರ (ಸಿಕಂದರ)ನ ಭಾರತದ ದಾಳಿ:— ಕ್ರಿ. ಪೂ. ೩೨೭– ಕ್ರಿ. ಪೂ. ೩೨೫ ( ಚಿತ್ರ ೨ ನೋಡಿರಿ ).

ಸಿಕಂದರನು ಡೋಣಿಗಳಿಂದ ರಚಿಸಿದ ಸೇತುವೆಯಿಂದ 'ಓಹಿಂದ'[೧] ಎಂಬಲ್ಲಿ ಸಿಂಧೂನದಿಯನ್ನು ಸೈನ್ಯದೊಂದಿಗೆ ದಾಟಿದನು, ತಕ್ಷಶಿಲೆ[೨] ಯೆಂಬ ರಾಜ್ಯದಲ್ಲಿ ಪ್ರವೇಶಿಸಿದನು. 'ಆಂಭಿ' ಎಂಬವನು ಅದರ ಅರಸನಿದ್ದನು. ಅವನು ಸಿಕಂದರನನ್ನು ತನ್ನ ರಾಜಧಾನಿಗೆ ಬರಮಾಡಿಕೊಂಡು ವೈಭವ ದಿಂದ ಸತ್ಕರಿಸಿದನು. ಅಲ್ಲದೆ, ಸೈನ್ಯಸಹಾಯ ಮಾಡುವೆನೆಂದು ಮಾತು ಕೊಟ್ಟನು. ಏಕೆಂದರೆ, ನೆರೆಹೊರೆಯ ರಾಜರಲ್ಲಿ ಪೌರವ ( ಪುರು ) ದೇಶದ[೩] ಪೋರಸನು ಆಂಭಿಯ ಕಡುವೈರಿಯಾಗಿದ್ದನು. ತಕ್ಷಶಿಲೆಯ ಸುತ್ತಲಿನ ರಾಜ್ಯಗಳನ್ನು ಗೆಲ್ಲುವದೇ ಸಿಕಂದರನ ಉದ್ದೇಶವಿತ್ತು. ಹೀಗಾಗಿ ತಕ್ಷಶಿಲೆಯಿಂದಲೆ ಸಿಕಂದರನು ಪೋರಸನಿಗೆ ಶರಣುಬರಲು ಹೇಳಿಕಳುಹಿ ದನು. ಇದರಿಂದ ರೊಚ್ಚಿಗೆದ್ದ ಪೋರಸನು ಸೈನ್ಯಸಮೇತನಾಗಿಯೇ ಬಂದು ಭೆಟ್ಟಿಯಾಗುವೆನೆಂದು ಒಗರಿನ ಪ್ರತ್ಯುತ್ತರ ಕಳುಹಿದನು. ಅದರಂತೆ ಜೆಹಲಂ ನದಿಯ ಎಡದಂಡೆಯ ಮೇಲೆ ಸಿಕಂದರನನ್ನು ಎದುರಿಸಲು ಅಲ್ಲಿಗೆ ಬಂದು ತಳವೂರಿ ನಿಂತನು. ಆಂಭಿಯು ಸೈನ್ಯದಿಂದೊಡಗೂಡಿ

೧. ಇದು ಈಗಿನ ಅಟೆಕ್ ಪಟ್ಟಣದ ಉತ್ತರಕ್ಕೆ ೧೬ ಮೈಲು ದೂರದಲ್ಲಿತ್ತು.

೨. ಈ ರಾಜ್ಯವು ಸಿಂಧೂನದಿಯ ಪೂರ್ವಕ್ಕೆ ಈಗಿನ ರಾವಳಪಿಂಡಿ ಜಿಲ್ಹೆಯಲ್ಲಿತ್ತು. ಅದರ ರಾಜಧಾನಿಯೂ ಅದೇ ಹೆಸರಿನದು. ಅದು ಆ ಕಾಲದಲ್ಲಿ ಅತಿ ದೊಡ್ಡ ವ್ಯಾಪಾರಕೇಂದ್ರ ಹಾಗು ವಿದ್ಯಾಕೇಂದ್ರವೆಂದು ಹೆಸರಾಗಿತ್ತು. ತತ್ತ್ವಜ್ಞಾನಿಗಳ ಸಲುವಾಗಿಯೂ ಖ್ಯಾತಿಗೊಂಡಿತ್ತು.

೩. ತಕ್ಷಶಿಲೆಯ ಆಗ್ನೇಯಕ್ಕೆ ಜೆಹಲಂ ಮತ್ತು ಚಿನಾಬ ನದಿಗಳ ನಡುವಿನ ಪ್ರದೇಶ.

ಸಿಕಂದರನೂ ಯುದ್ಧಕ್ಕೆ ಅಣಿಯಾಗಿ ನದಿಯ ಬಲದಂಡೆಗೆ ಬಂದನು. ಆದರೆ ನದಿಗೆ ಪ್ರವಾಹ (ನೆರೆ) ಬಂದಿತ್ತಾದ್ದರಿಂದ ತಾನು ತಳವೂರಿದ ಸ್ಥಳದಿಂದ ಅದನ್ನು ದಾಟುವದು ಸಿಕಂದರನಿಗೆ ಅಸಾಧ್ಯವೆನಿಸಿತು. ಆದ್ದರಿಂದ ಕೆಲವು ದಿನ ಅವನು ತಟಸ್ಥನಂತಿದ್ದು ವೈರಿಗೆ ತಿಳಿಯದಂತೆ ಹೊಳೆಯ ಮೇಲುಗಡೆಗೆ ಸುಲಭವಾದ ಸ್ಥಳವೊಂದರಿಂದ ತುಸು ಸೈನ್ಯದೊಂದಿಗೆ ನದಿಯನ್ನು ದಾಟಿ ಪೋರಸನನ್ನು ಎದುರಿಸಿದನು. ಪೋರಸನ ಸೈನ್ಯವು ಪ್ರಚಂಡವಿತ್ತು (೩೦ ಸಾವಿರ ಕಾಲಾಳು, ೪ ಸಾವಿರ ಕುದುರೆ, ೩೦೦ ರಥ ಮತ್ತು ೨೦೦ ಆನೆಗಳು). ಸೈನ್ಯರಚನೆಯಲ್ಲಿ ಆನೆಗಳನ್ನು ಮಧ್ಯದಲ್ಲಿ ಸಾಲಾಗಿ ಮುಂದೆ ನಿಲ್ಲಿಸಲಾಯಿತು. ಆದರೆ ಸಿಕಂದರನು ನುರಿತ ಸೇನಾಪತಿ; ಅವನ ಅಶ್ವಸೇನೆಯು ಉತ್ಕೃಷ್ಟವಿತ್ತು. ಅದು ವೈರಿಯ ಆನೆಗಳು ನಿಂತ ಸೈನ್ಯದ ಮಧ್ಯಭಾಗವನ್ನು ಭೇದಿಸುವ ಗೊಡವೆಗೆ ಹೋಗದೆ, ಎಡಪಕ್ಕದ ರಾವುತರ ಮೇಲೇರಿ ಹೋಯಿತು (ಚಿತ್ರ ೩ ನೋಡಿರಿ). ಗ್ರೀಕ ಬಿಲ್ಲುಗಾರರ ಹಾವಳಿಯನ್ನು ಪೌರವ ಸೈನಿಕರು ಸಹಿಸಲಾರದಾದರು. ವಿಪರೀತ ಕೊಲೆಯಾಯಿತು. ಪೋರಸನ ಆನೆಗಳು ಮೊದಮೊದಲು ಶತ್ರುಸೈನ್ಯದಲ್ಲಿ ನುಗ್ಗಿ ಹಾವಳಿ ಮಾಡಿದವು. ಆದರೆ ವೈರಿಯ ಬಾಣ, ಭರ್ಚಿಗಳಿಂದ ಗಾಯಗೊಂಡು ಅವು ಶತ್ರು–ಮಿತ್ರರೆಂಬ ಭೇದ ಮಾಡದಲೆ, ಪೋರಸನ ಎಷ್ಟೋ ಸೈನಿಕರನ್ನು ತುಳಿದು ಕೊಂದವು! ಪೌರವನ ಸೇನೆಯು ಬೇಗನೆ ಕರಗಿತು. ಆನೆಯ ಮೇಲೆ ಕುಳಿತು ಯುದ್ಧ ಮಾಡುತ್ತಿದ್ದ ಪೋರಸನಿಗೂ ತೀವ್ರ ಗಾಯವಾಯಿತು. ಅವನನ್ನು ಸಿಕಂದರನ ಬಳಿಗೆ ಒಯ್ಯಲಾಯಿತು (ಚಿತ್ರ ೪ ನೋಡಿರಿ). ಸಿಕಂದರನು ಅವನಿಗೆ 'ನಿನ್ನನ್ನು ಹೇಗೆ ನಡೆಸಿಕೊಳ್ಳಬೇಕು?' ಎಂದು ಕೇಳಿದನು. ಅದಕ್ಕೆ ಪೋರಸನು, 'ಅರಸನಂತೆ ವರ್ತಿಸು,' ಎಂದು ಅವನಿಗೆ ಮಾರುತ್ತರವಿತ್ತನು. ಈ ಧೈರ್ಯವಾದ ಉತ್ತರದಿಂದ ಸಂತೋಷಗೊಂಡ ಸಿಕಂದರನು ಪೋರಸನಿಗೆ ಅವನ ರಾಜ್ಯವನ್ನು ಮರಳಿಕೊಟ್ಟನು. ಪೋರಸನು ಸಿಕಂದರನ ಮಿತ್ರನಾದನು.

ಮುಂದೆ ಸಿಕಂದರನು ಪೋರಸನ ರಾಜ್ಯದ ಸಮೀಪದ ಚಿಕ್ಕ–ಪುಟ್ಟ ರಾಜ್ಯಗಳಲ್ಲಿ ನುಗ್ಗಿದನು. ಚಿನಾಬ, ರಾವಿ ನದಿಗಳನ್ನು ದಾಟಿ ಬಿಯಾಸ ನದಿಯ ದಂಡೆಗೆ ಸೇರಿದನು. ಅದನ್ನೂ ದಾಟಿ ಗಂಗಾನದಿಯ ಪ್ರದೇಶಕ್ಕೆ

ಮುನ್ನುಗ್ಗ ಬಯಸಿದನು. ಆದರೆ ಇದಕ್ಕೆ ಅವನ ಸೈನಿಕರು ಸಮ್ಮತಿಸಲಿಲ್ಲ. ಏಕೆಂದರೆ, ಅವರು ಸ್ವದೇಶದಿಂದ ಹೊರಬಿದ್ದು ಬಹಳ ವರುಷಗಳಾಗಿದ್ದವು ಸಿಕಂದರನು ಉಪಾಯಗಾಣದೆ ಸೈನ್ಯದೊಂದಿಗೆ ಸ್ವದೇಶಕ್ಕೆ ಮರಳಬೇಕಾಯಿತು. ಅವನು ಜೆಹಲಂ ನದಿಗೆ ಮರಳಿ, ಸೈನ್ಯದ ಒಂದು ತುಕಡಿಯನ್ನು ಎರಡು ಸಾವಿರ ಡೋಣಿಗಳಲ್ಲಿ ದಕ್ಷಿಣಾಭಿಮುಖವಾಗಿ ಕಳುಹಿದನು. ತಾನು ಮಿಕ್ಕ ಸೈನ್ಯದೊಂದಿಗೆ ರಾವಿ ಮತ್ತು ಚೆನಾಬ ನದಿಗಳ (ನಡುವಿನ) ಕೆಳಗಣ ಕೊಳ್ಳಪ್ರದೇಶಗಳನ್ನು ಹೊಕ್ಕು ಅಲ್ಲಿಯ ಜನರನ್ನು ವಿಪರೀತ ವಿಪತ್ತಿಗೀಡು ಮಾಡಿದನು. ಆದರೆ ಮಾಳವರೆಂಬ ಬಲಾಢ್ಯ ಕುಲದ[೧] ಕೋಟೆಗೆ ಲಗ್ಗೆ ಹಾಕಿದಾಗ, ಸಿಕಂದರನಿಗೆ ತೀವ್ರ ಗಾಯವಾಗಿ ಕೆಲಹೊತ್ತು ಎಚ್ಚರ ತಪ್ಪಿತಂತೆ! ಬಳಿಕ ಅವನು ಮುಂದೆ ಸಾಗಿ ಸಿಂಧದಲ್ಲಿಯ ಚಿಕ್ಕ-ಪುಟ್ಟ ರಾಜ್ಯಗಳನ್ನು ಅಂಕೆಗೆ ತಂದು ಕ್ರಿ. ಪೂ. ೩೨೫ರಲ್ಲಿ ಅರಬ್ಬೀ ಸಮುದ್ರಕ್ಕೆ ತಲುಪಿದನು. ಅಲ್ಲಿ ತನ್ನ ಸೈನ್ಯದಲ್ಲಿ ಎರಡು ಭಾಗಗಳನ್ನು ಮಾಡಿ, ಒಂದನ್ನು ಜಲಮಾರ್ಗವಾಗಿ ಸ್ವದೇಶಕ್ಕೆ ಕಳುಹಿದನು. ತಾನು ಮತ್ತೊಂದರೊಂದಿಗೆ ದಕ್ಷಿಣ ಬಲೂಚಿಸ್ತಾನವನ್ನು ಸೇರಿ, ಅಲ್ಲಿಯ ಮರುಭೂಮಿಗಳನ್ನು ಬಹು ಪ್ರಯಾಸದಿಂದ ದಾಟಿ, ಕೊನೆಗೆ ಬಾಬಿಲೋನ ಪಟ್ಟಣವನ್ನು ಸೇರಿದನು. ಅಲ್ಲಿಯೆ ಜ್ವರಪೀಡಿತನಾಗಿ ಮರಣಹೊಂದಿದನು.[೨] ಆಗ ಅವನ ವಯಸ್ಸು ೩೨ ವರುಷ ಮಾತ್ರವಿತ್ತು! ಇದರಲ್ಲಿ ಅವನು ಸುಮಾರು ಹತ್ತು ವರುಷಗಳನ್ನು ಯುದ್ಧದಿಂದ ರಾಜ್ಯವನ್ನು ವಿಸ್ತರಿಸುವದರಲ್ಲಿ ಕಳೆದನು; ತನ್ನದೇ ಆದ ದೊಡ್ಡ ಸಾಮ್ರಾಜ್ಯವನ್ನು ಕಟ್ಟಿದನು. ಅಂತೆಯೇ ಅವನನ್ನು ಜಗತ್ತಿನ ವೀರಶಿರೋಮಣಿಗಳ ಮಾಲಿಕೆಯಲ್ಲಿ ಇಂದಿಗೂ ಸೇರಿಸಲಾಗಿದೆ.

## ಗ್ರೀಸ ಮತ್ತು ಭಾರತಗಳಲ್ಲಿ ತತ್ಕಾಲೀನ ಪರಿಸ್ಥಿತಿಗಳು:—

**ಅ.** ಗ್ರೀಸದಲ್ಲಿ:— ಆಗ ಗ್ರೀಸದಲ್ಲಿ ಎಷ್ಟೋ ಚಿಕ್ಕ ರಾಜ್ಯಗಳಿದ್ದವು. ಅವುಗಳಲ್ಲಿ ಕೆಲವು ಪ್ರಜಾಸತ್ತೆಯುಳ್ಳವಾಗಿದ್ದವು.[೩] ಮತ್ತೂ ಕೆಲವು

೧. ಈ ಕುಲದ ರಾಜ್ಯವು ರಾವಿ ನದಿಯ ಕೊಳ್ಳದಲ್ಲಿತ್ತು.

೨. ಜನನ, ಕ್ರಿ. ಪೂ. ೩೫೬ ರಲ್ಲಿ ; ಮರಣ, ಕ್ರಿ. ಪೂ. ೩೨೩ ರಲ್ಲಿ.

೩. ಪ್ರಜಾಸತ್ತೆಯುಳ್ಳ ರಾಜ್ಯಗಳಿಗೆ 'ಗಣರಾಜ್ಯ'ಗಳೆಂದೂ ಹೆಸರು.

ಪುರರಾಜ್ಯಗಳೆನಿಸಿದವು. ಅವುಗಳಲ್ಲಿ ಪರಸ್ಪರ ದ್ವೇಷ, ಅಸೂಯೆ, ವೈರ ಭಾವಗಳಿದ್ದವು. ಆದ್ದರಿಂದ ಅವುಗಳ ನಡುವೆ ಮೇಲಿಂದಮೇಲೆ ಜಗಳಗಳೂ ಯುದ್ಧಗಳೂ ನಡೆಯುತ್ತಿದ್ದವು. ಮೆಸಿಡೋನದ ಅರಸನಾದ ಫಿಲಿಪ್ ಮತ್ತು ಅಲೆಕ್ಝಾಂಡರ ಇವರು ಮೇಲಿನ ಪರಿಸ್ಥಿತಿಯನ್ನು ಹೋಗಲಾಡಿಸಿದರು. ಮತ್ತು ಇವೆಲ್ಲ ರಾಜ್ಯಗಳನ್ನು ಒಟ್ಟುಗೂಡಿಸಿ ಗ್ರೀಸ ದೇಶವನ್ನು ಬಲಾಢ್ಯ ರಾಷ್ಟ್ರವನ್ನಾಗಿ ಮಾಡಿದರು. ಮರಣಸಮಯದಲ್ಲಿ ಅಲೆಕ್ಝಾಂಡರನಿಗೆ ಮಕ್ಕಳಿರಲಿಲ್ಲ. ಆದ್ದರಿಂದ ಅವನ ಸಾಮ್ರಾಜ್ಯವನ್ನು ಮೆಸಿಡೋನದ ಬೇರೆ ಬೇರೆ ಅಧಿಕಾರಿಗಳಲ್ಲಿ ಹಂಚಲಾಯಿತು. ಭಾರತದಲ್ಲಿ ಅವನು ಗೆದ್ದ ಪ್ರದೇಶವು ಅವನ ಸೇನಾಪತಿಗಳಲ್ಲೊಬ್ಬನಾದ 'ಸೆಲ್ಯುಕಸ' ಎಂಬವನ ಪಾಲಿಗೆ ಬಂತು. ಬರಬರುತ್ತ ಈ ಅಧಿಕಾರಿಗಳು ಸ್ವತಂತ್ರರಾದರು. ಅವರವ ರೊಳಗೆ ಕಲಹಗಳಾಗತೊಡಗಿದವು. ಪರರ ದಾಳಿಗಳನ್ನು ಎದುರಿಸಬೇಕಾ ಯಿತು. ಕೊನೆಗೆ[೧] ಅವು ಒಂದೊಂದೆ (ಆಗ ತಾನೆ ಉದಯಿಸುತ್ತಿದ್ದ) ರೋಮ ಸಾಮ್ರಾಜ್ಯದಲ್ಲಿ ಸಮಾವೇಶವಾದವು.

ಆ. ಭಾರತದಲ್ಲಿ :—ಆಗಿನ ಕಾಲದಲ್ಲಿ[೨] ಭಾರತವು ಈಗಿನ ಅಫಗಾನಿ ಸ್ತಾನದ ಪಶ್ಚಿಮ ಮೇರೆಯವರೆಗೆ ಹಬ್ಬಿತ್ತು. ಗ್ರೀಸದಂತೆ, ಭಾರತದ ವಾಯುವ್ಯ (ಗಡಿನಾಡು) ಪ್ರದೇಶದಲ್ಲಿ ಎಷ್ಟೋ ಚಿಕ್ಕ ಚಿಕ್ಕ ರಾಜ್ಯಗಳಿದ್ದವು. ಅವುಗಳ ರಾಜರು ಬಹುಮಟ್ಟಿಗೆ ಸ್ವತಂತ್ರರಿದ್ದರು. [ಉದಾ:—ಅಶ್ವಕ, ಪುಷ್ಕ ಲಾವತೀ, ತಕ್ಷಶಿಲೆ, ಅಭಿಸಾರ. ತಕ್ಷಶಿಲೆಯ ಆಗ್ನೇಯಕ್ಕೆ ಪೌರವ ರಾಜ ವಿತ್ತು. ರಾವಿ ನದಿಯ ಕೆಳಗಣ ಕಂದರ ಪ್ರದೇಶಗಳಲ್ಲಿ, ಶಿಬಿ ಮತ್ತು ಮಾಳವ ಕುಲಗಳಿದ್ದವು. ಸಿಂಧೂನದೀ ಮುಖಜಭೂಮಿಯಲ್ಲಿ (ಡೆಲ್ಟಾದಲ್ಲಿ) ಪತ್ತಲ ವೆಂಬ ಪುರರಾಜ್ಯವಿತ್ತು.] ಅವರಲ್ಲಿ ಮೇಲಿಂದಮೇಲೆ ಜಗಳಗಳಾಗುತ್ತಿದ್ದವು. ಸಿಕಂದರನ ದಾಳಿಯ ಮೊದಲು ವಾಯುವ್ಯದಲ್ಲಿಯ ರಾಜರು ಮತ್ತು ಕುಲ ಗಳು ಪಾರಸೀಕ ಸಮ್ರಾಟರಿಗೆ ಕಪ್ಪ-ಕಾಣಿಕೆಗಳನ್ನು ಸಲ್ಲಿಸುವ ರೂಢಿಯಿತ್ತು; ಮತ್ತು ಯುದ್ಧದಲ್ಲಿ ನೆರವಾಗಲು ಅವರಿಗೆ ಸೈನ್ಯಗಳನ್ನು ಕಳಿಸುವ ರೂಢಿ ಯಿತ್ತು.

೧. ಕ್ರಿ. ಪೂ. ೨೪೦ರ ಸುಮಾರಕ್ಕೆ.
೨. ಕ್ರಿ. ಪೂ. ೪ನೆಯ ಶತಮಾನದ ಮಧ್ಯದ ಸುಮಾರಕ್ಕೆ.

ಸಿಂಧೂ ಮತ್ತು ಗಂಗಾ ನದಿಗಳ ನಡುವಿನ ರಾಜ್ಯಗಳ ರಾಜರ ಶಕ್ತಿಗನುಸಾರವಾಗಿ ಅವುಗಳ ಮೇರೆಗಳಲ್ಲಿ ಹಿಗ್ಗು-ಕುಗ್ಗುಗಳು ಆಗುತ್ತಿದ್ದವು.

ಮಗಧ ರಾಜ್ಯವು ಬಲಾಢ್ಯ ರಾಜ್ಯವೆನಿಸಿತ್ತು. ಅಲ್ಲಿ ನಂದವಂಶದ ರಾಜರು ಆಳುತ್ತಿದ್ದರು. ಧನನಂದನೆಂಬ ಅರಸನ ಸೈನ್ಯ,[೧] ಸಂಪತ್ತುಗಳು ಅಪಾರವಿದ್ದವು.

ಜೈನ ಮತ್ತು ಬೌದ್ಧ ಧರ್ಮಗಳು ಹಬ್ಬತೊಡಗಿದ್ದರಿಂದ ಭಾರತದ ಕೆಲವೆಡೆಗಳಲ್ಲಿ ಜಾತೀಯತೆಯ ಪ್ರಭಾವವು ಕುಗ್ಗ ಹತ್ತಿತ್ತು.

## ಭಾರತದಲ್ಲಿ ಅಲೆಕ್ಝಾಂಡರನ ದಾಳಿಯ ಪರಿಣಾಮಗಳು :—

ಅ. ವಾಯುವ್ಯಭಾರತ ಪ್ರದೇಶಗಳ ಆಡಳಿತೆಯಲ್ಲಿ ಹೊಸ ಕ್ರಮ ಉಂಟಾಯಿತು. [ಜೆಹಲಂನದಿಯ ಪಶ್ಚಿಮ ಪ್ರದೇಶಗಳನ್ನು 'ಮಂಡಲ'ಗಳನ್ನಾಗಿ ಮಾಡಿ, ಸಿಕಂದರನು ಅವುಗಳ ಆಡಳಿತವನ್ನು ಗ್ರೀಕ ಅಧಿಕಾರಿಗಳಿಗೆ ಒಪ್ಪಿಸಿದನು. ಆಂಭಿಯಂತಹ ಸ್ಥಾನಿಕ ರಾಜರನ್ನು ಅವರಿಗೆ ಸಹಾಯಕ್ಕಾಗಿ ಕೊಟ್ಟನು. ಆ ನದಿಯ ಪೂರ್ವಕ್ಕೆ ಮೊದಲಿದ್ದ ರಾಜ್ಯಗಳನ್ನು 'ಸಂರಕ್ಷಿತ' ರಾಜ್ಯಗಳನ್ನಾಗಿ ಮಾಡಿದನು. ಅವುಗಳ ರಾಜರು 'ಸಾಮಂತ' ರಾಜರೆನಿಸಿದರು. (ಉದಾ: ಪೋರಸ, ಅಭಿಸಾರ ಮುಂತಾದವರು.)] ತಕ್ಷಶಿಲೆಯಂಥ ಆಯಕಟ್ಟಿನ ಸ್ಥಳಗಳಲ್ಲಿ ಸಂರಕ್ಷಕ ಸೈನ್ಯಗಳನ್ನು ಇಟ್ಟನು. ಗೆದ್ದ ಪ್ರದೇಶಗಳಲ್ಲಿ ತನ್ನ ಅಧಿಕಾರವು ಸ್ಥಿರವಾಗಿ ಉಳಿಯಲಿಕ್ಕೆ ಮತ್ತು ಪಂಜಾಬದಲ್ಲಿ ಜಲಮಾರ್ಗವಾಗಿ ವ್ಯಾಪಾರವು ಬೆಳೆಯಲಿಕ್ಕೆ ಹೊಸ ಪಟ್ಟಣಗಳನ್ನು ಕಟ್ಟಿದನು.[೨] ಇವು ಬಹುತರ ನದಿಗಳ ದಂಡೆಗುಂಟ ಕಟ್ಟಲ್ಪಟ್ಟವು.

ಆ. ಪಶ್ಚಿಮದೇಶದವರೊಂದಿಗೆ ಭಾರತದ ಸಂಪರ್ಕವು ಬೆಳೆಯಿತು.

---

೧. ೨ ಲಕ್ಷ ಕಾಲಾಳುಗಳು, ೨೦ ಸಾವಿರ ರಾವುತರು, ೩ ಸಾವಿರ ಆನೆಗಳು, ೨ ಸಾವಿರ ರಥಗಳು.

೨. ಇದರಂತೆ ಸಿಕಂದರನು ತಾನು ಗೆದ್ದ ಎಷ್ಟೋ ಪ್ರದೇಶಗಳಲ್ಲಿ ತನ್ನ ಹೆಸರಿನಪಟ್ಟಣಗಳನ್ನು ಕಟ್ಟಿಸಿದನು. ( ಉದಾ :—ಇಜಿಪ್ತ, ಹಿರಾತ, ಕಾಬೂಲ ಮುಂತಾದವುಗಳಲ್ಲಿ. )

ಇದರ ಪರಿಣಾಮವಾಗಿ, ಪರಸ್ಪರರಲ್ಲಿ ತಿಳಿವಳಿಕೆ ಹೆಚ್ಚಿತು. ...ರಸ್ಪ. ರಲ್ಲಿ ವ್ಯಾಪಾರ ಬೆಳೆಯಿತು. ಎಷ್ಟೋ ವಿಷಯಗಳಲ್ಲಿ[೧] ಗ್ರೀಕರ ಪ್ರಭಾವವು ಭಾರತೀಯರ ಮೇಲೂ ಭಾರತೀಯರ ಪ್ರಭಾವವು ಗ್ರೀಕರ ಮೇಲೂ ಆಗತೊಡಗಿದವು.

ಗ್ರೀಕ ಅಧಿಕಾರಿಗಳಿಗೆ ಹಿಂದುರಾಜ್ಯಗಳಲ್ಲಿ ಅಧಿಕಾರ-ಸ್ಥಾನಗಳು ದೊರೆಯಹತ್ತಿದವು.

## ಅಭ್ಯಸನಗಳು.

೧. ಕೆಳಗಿನ ವಾಕ್ಯಗಳಲ್ಲಿ ತೆರವು ಬಿಟ್ಟಿರುವ ಸ್ಥಳಗಳನ್ನು ಯೋಗ್ಯ ಶಬ್ದಗಳಿಂದ ತುಂಬಿರಿ.

(ಅ) ಸಿಕಂದರನು...........ಘಟ್ಟದಿಂದ ಭಾರತಕ್ಕೆ ಬಂದು, ................ದ ಮರುಭೂಮಿಗಳನ್ನು ದಾಟ ಸ್ವದೇಶಕ್ಕೆ ಮರಳಿಹೋದನು.

(ಆ) ಪ್ರಜಾಸತ್ತೆಯುಳ್ಳ ರಾಜ್ಯಗಳಿಗೆ...........ರಾಜ್ಯಗಳೆಂದೂ ಹೆಸರು.

(ಇ) ಸಿಕಂದರನ ಬಳಿಕ, ಭಾರತದಲ್ಲಿಯ ಅವನ ಅಧಿಕಾರವು...........ನ ಕೈಸೇರಿತು.

೨. ಕೆಳಗೆ ಕೊಟ್ಟ ಪ್ರಶ್ನೆಗಳಿಗೆ ಉತ್ತರ ಬರೆಯಿರಿ : (ಪ್ರತಿಯೊಂದರ ಉತ್ತರವು ಒಂದು ವಾಕ್ಯಕ್ಕೆ ಮಿಕ್ಕಕೂಡದು).

(ಅ) ಸಿಕಂದರನ ಹಿರಿಯಾಸೆ ಏನಿತ್ತು ? (ಆ) ಭಾರತದ ದಾಳಿಯಲ್ಲಿ ಸಿಕಂದರನ ಉದ್ದೇಶವೇನಿತ್ತು ? (ಇ) ಆಂಭಿ ರಾಜನು ಸಿಕಂದರನಿಗೆ ಕೊಟ್ಟ ಮಾತು ಯಾವದು ?

೧. ಕ್ರಮೇಣವಾಗಿ, ಗ್ರೀಕರ ಯುದ್ಧಕಲೆ, ಶಿಲ್ಪಕಲೆ, ಖಗೋಲಶಾಸ್ತ್ರ, ನಾಣ್ಯ ಪದ್ಧತಿಗಳು ಭಾರತೀಯರ ಮೇಲೆ ತಮ್ಮ ಪ್ರಭಾವ ಬೀರಿದವು; ಭಾರತೀಯರ ಗಣಿತಶಾಸ್ತ್ರ, ಜ್ಯೋತಿಷಶಾಸ್ತ್ರ, ತತ್ತ್ವಜ್ಞಾನ, ಧರ್ಮಭಾವನೆಗಳು ಗ್ರೀಕರ ಮೇಲೆ ತಮ್ಮ ಪ್ರಭಾವ ಬೀರಿದವು.

(ಈ) ಕಾಳಗದನಂತರದ ಭೆಟ್ಟಿಯಲ್ಲಿ ಪೋರಸನು ಸಿಕಂದರನಿಗೆ ಕೊಟ್ಟ ಮಾರುತ್ತರವುಯಾವದು?

೩. ಈ ಪ್ರಕರಣದಲ್ಲಿ, ಕೆಳಗೆ ಕಾಣಿಸಿದ ಪ್ರಸಂಗಗಳನ್ನು ಸಂಭಾಷಣೆ ಅಥವಾ ನಾಟ್ಯೀಕರಣಕ್ಕಾಗಿ ಉಪಯೋಗಿಸಿಕೊಳ್ಳಬಹುದು:—

(ಅ) ತಕ್ಷಶಿಲೆಯಲ್ಲಿ ಸಿಕಂದರನಿಗೆ ಆಂಭಿಯ ಸತ್ಕಾರ.

(ಆ) ಕಾಳಗದ ಅನಂತರ, ಪೋರಸ ಮತ್ತು ಸಿಕಂದರರ ಭೆಟ್ಟಿ.

## ೭ನೆಯ ಪ್ರಕರಣ



ಚಿತ್ರ ೧. ಸಭೆಯಲ್ಲಿ ನಂದರಿಂದ ಅಪಮಾನಗೊಂಡ ಚಾಣಕ್ಯ



ಚಿತ್ರ ೨. ಸೆಲ್ಯುಕಸನು ಚಂದ್ರಗುಪ್ತನಿಗೆ ತನ್ನ ಮಗಳನ್ನು ಮದುವೆ ಮಾಡಿಕೊಟ್ಟನು.




ಚಿತ್ರ ೩. ಚಂದ್ರಗುಪ್ತನ ಸಾಮ್ರಾಜ್ಯ.



ಚಿತ್ರ ೪. ಚಂದ್ರಗುಪ್ತನ ಕಾಲದ ಸಮಾಜದಲ್ಲಿಯ ಏಳು ವಿಭಾಗಗಳು.

# ೭ನೆಯ ಪ್ರಕರಣ

**ಚಂದ್ರಗುಪ್ತಮೌರ್ಯ** (ಕ್ರಿ. ಪೂ. ೩೨೦ರಿಂದ ಕ್ರಿ. ಪೂ. ೨೯೮ರ ವರೆಗೆ)

'ಅಲೆಕ್ಝಾಂಡರನ ದಾಳಿ'ಯ ಸಮಯದಲ್ಲಿ ಮಗಧ ರಾಜ್ಯದ ಆಳಿಕೆಯು ನಂದರೆಂಬ ಅರಸರ ವಶದಲ್ಲಿತ್ತಷ್ಟೆ. ಆದರೆ ಮುಂದೆ ಕೆಲವೇ ವರುಷಗಳಲ್ಲಿ[೧] ಚಂದ್ರಗುಪ್ತ ಮೌರ್ಯನೆಂಬವನು ಅವರ ರಾಜ್ಯವನ್ನು ತಾನು ಗಳಿಸಿದನಲ್ಲದೆ, ಅದನ್ನು ಸಾಮ್ರಾಜ್ಯವನ್ನಾಗಿ ಮಾರ್ಪಡಿಸಿ ಭಾರತದ ಮೊಟ್ಟಮೊದಲನೆಯ ಸಮ್ರಾಟ (ಸಾರ್ವಭೌಮ)ನೆಂದು ಹೆಸರಾದನು.

**ಚಂದ್ರಗುಪ್ತನು ರಾಜ್ಯ ಗಳಿಸಿದ ಬಗೆ :—**

ಚಂದ್ರಗುಪ್ತನು ನಂದ ಅರಸರಲ್ಲಿಯ ಮಹಾಪದ್ಮನೆಂಬ ಅರಸನ ಮಗನಾದರೂ 'ಮುರಾ' ಎಂಬ ಹೆಸರಿನ ಅವನ ಶೂದ್ರ ದಾಸಿಯಲ್ಲಿ ಜನಿಸಿದವನೆಂದು ಸಾಮಾನ್ಯ ತಿಳುವಳಿಕೆಯಿತ್ತು. ಇದಕ್ಕಾಗಿಯೇ ಚಂದ್ರಗುಪ್ತನಿಗೂ ಅವನ ಸಂತತಿಯವರಿಗೂ ಮೌರ್ಯರೆಂದು ಹೆಸರುಂಟಾಯಿತು ; ಮತ್ತು ಅವನು ಮಗಧದ ಅರಸೊತ್ತಿಗೆಗೆ ನೇರವಾದ ಬಾಧ್ಯಸ್ಥನಲ್ಲವೆಂದು ತಿಳಿಯಲಾಯಿತು. ನಂದರು ಚಂದ್ರಗುಪ್ತನ ಬಗೆಗೆ ಸಂಶಯ ತಾಳಿದರು. ಪಟ್ಟದ ಸಲುವಾಗಿ ಅವನು ಮುಂದೆ ಪ್ರಯತ್ನಿಸಬಹುದೆಂಬ ಭೀತಿಯಿಂದಲೋ ಅಥವಾ ಆಗಾಗಲೇ ಅವನು ಅದರ ಸಲುವಾಗಿ ಒಳಸಂಚು ನಡೆಸಿದ್ದನೆಂಬ ಸಂಶಯದಿಂದಲೋ, ನಂದರು ಅವನನ್ನು ಮಗಧರಾಜ್ಯದಿಂದ ಹೊರದೂಡಿದರು. ಇದರಂತೆಯೆ, ಆರ್ಯಚಾಣಕ್ಯ[೨] ನೆಂಬ ಬ್ರಾಹ್ಮಣ ವಿದ್ವಾಂಸನೊಬ್ಬನು ಚಂದ್ರಗುಪ್ತನ ಸಹಾಯಕನೆಂದೋ ಅಥವಾ ಮತ್ತಾವ ಕಾರಣದಿಂದಲೋ ನಂದರಿಂದ ಅಪಮಾನಗೊಂಡು ಮಗಧದಿಂದ ಹೊರಬೀಳಬೇಕಾಯಿತು. ಆದರೆ ಹೊರಬೀಳುವ ಮುನ್ನ ಅವನು ನಂದರಿಂದ ತನಗಾದ ಅಪಮಾನಕ್ಕಾಗಿ ಅವರನ್ನು ನಿರ್ಮೂಲಮಾಡಿಯೇ ತೀರುವೆನೆಂದು ಪಣತೊಟ್ಟನು.

---

೧. ಕ್ರಿ. ಪೂ. ೩೨೨ ರಲ್ಲಿ

೨. ಇವನ ಮೂಲ ಹೆಸರು ವಿಷ್ಣುಗುಪ್ತ

( ಚಿತ್ರ ೧ ನೋಡಿರಿ ). ಬಳಿಕ ಕೆಲವು ಸಮಯ ಅವನು ತಕ್ಷಶಿಲೆ[೧] ಯಲ್ಲಿ ಒಬ್ಬ ಆಚಾರ್ಯ[೨]ನಾಗಿದ್ದನು. ಅಲ್ಲಿಯೆ ಅವನಿಗೆ ಪ್ರಸಂಗವಶದಿಂದ ಚಂದ್ರ ಗುಪ್ತನ ಭೆಟ್ಟಿಯಾಯಿತು. ನಂದರ ನಿರ್ಮೂಲನವು ಇವರೀರ್ವರ ಸಾಮಾನ್ಯ ಗುರಿಯಾಯಿತು. ಇದೇ ಸಮಯದಲ್ಲಿ, ಭಾರತದ ದಾಳಿಗಾಗಿ ಬಂದಿದ್ದ ಸಿಕಂದರನು ತಕ್ಷಶಿಲೆಯಲ್ಲಿ ಬೀಡುಬಿಟ್ಟಿದ್ದನು. ಗ್ರೀಕರ ಯುದ್ಧಕಲೆಯನ್ನು ತುಸುಮಟ್ಟಿಗೆ ಅರಿತುಕೊಂಡ ಚಂದ್ರಗುಪ್ತನು ಅವನನ್ನು ತಕ್ಷಶಿಲೆಯಲ್ಲಿ ಭೆಟ್ಟಿಯಾಗಿ ಸಹಾಯ ಬೇಡಿದನು. ಪ್ರಾಯಶಃ ಚಾಣಕ್ಯನೆ ಇದಕ್ಕಾಗಿ ಅವನಿಗೆ ಸಲಹೆ ಕೊಟ್ಟಿರಬಹುದು. ಆದರೆ ಭೆಟ್ಟಿಯಲ್ಲಿ ಚಂದ್ರಗುಪ್ತನ ಉದ್ದೇಶವು ಫಲಿಸಲಿಲ್ಲ. ಅಷ್ಟೇ ಅಲ್ಲ ; ಅಲ್ಲಿ ಅವನಿಗೆ ಸಿಕಂದರನಿಂದ ಜೀವದ ಮೇಲೆ ಗಂಡಾಂತರ ಒದಗಿತಂತೆ ! ಆದ್ದರಿಂದ ಚಂದ್ರಗುಪ್ತನು ಅಲ್ಲಿಂದ ಹೇಗೋ ಪಾರಾಗಿಹೋಗಿ, ಪಂಜಾಬ ಮತ್ತು ಸಿಂಧ ಪ್ರಾಂತಗಳಲ್ಲಿಯ ಅಸಭ್ಯ (ಕಾಡು) ಜನರ ಸೈನ್ಯವೊಂದನ್ನು ತಯಾರಿಸಿದನು. ಸಿಕಂದರನು ಮರಳಿ ಹೋದನಂತರ[೩] ಉತ್ತರ ಹಿಂದುಸ್ತಾನದ ಕೆಲವು ರಾಜರ ಸಹಾಯ ಪಡೆದು ಚಾಣಕ್ಯನ ಮಾರ್ಗದರ್ಶಕತ್ವದಲ್ಲಿ ಮಗಧದ ಮೇಲೆ ಸಾಗಿ ದಾಳಿ ಮಾಡಿದನು. ಕಾಳಗದಲ್ಲಿ ನಂದರನ್ನು ಸೋಲಿಸಿ ಸಂಹಾರ ಮಾಡಲಾಯಿತು. ಚಂದ್ರ ಗುಪ್ತನಿಗೆ ಮಗಧರಾಜ್ಯದ ಒಡೆತನವು ದೊರೆಯಿತು.

**ಚಂದ್ರಗುಪ್ತನು ಸಮ್ರಾಟನಾದುದು ( ಚಂದ್ರಗುಪ್ತನ ರಾಜ್ಯ ವಿಸ್ತಾರ ) :—**

ಚಂದ್ರಗುಪ್ತನು ಬಹು ಶೂರನಲ್ಲದೆ ಬಹು ಮಹತ್ವಾಕಾಂಕ್ಷಿ. ಅವನು ರಾಜ್ಯವನ್ನು ವಿಸ್ತರಿಸುವ ಹಿರಿಯಾಸೆಯುಳ್ಳವನು. ಅವನು ಮೊದಲಿಗೆ ಸಿಕಂದರನು ಭಾರತದಲ್ಲಿ ತನ್ನ ಹಿಂದೆ ಬಿಟ್ಟುಹೋಗಿದ್ದ ಸಂರಕ್ಷಕ-ಸೈನ್ಯಗಳನ್ನೆಲ್ಲ ಸಿಂಧೂನದಿಯ ಆಚೆಗೆ ಹೊಡೆದೋಡಿಸಿದನು. ಬಳಿಕ ವಾಯುವ್ಯದಲ್ಲಿಯ ಚಿಕ್ಕದೊಡ್ಡ ರಾಜ್ಯಗಳ ರಾಜರನ್ನು ಬಲಾತ್ಕಾರದಿಂದ ತನ್ನ ಸಾಮಂತ ರಾಜರನ್ನಾಗಿ ಮಾಡಿಕೊಂಡನು. ಮಾಳವಾ, ಸೌರಾಷ್ಟ್ರಗಳೂ ಚಂದ್ರಗುಪ್ತನ ಆಳಿಕೆಗೆ ಒಳಪಟ್ಟಿದ್ದವು.

---

೧. ಇದು ಆಗಿನ ಪ್ರಸಿದ್ಧ ವಿದ್ಯಾಕೇಂದ್ರ.

೨. ಗುರು ಅಥವಾ ಶಿಕ್ಷಕ.

೩. ಕ್ರಿ. ಪೂ. ೩೨೩ ಅಥವಾ ೩೨೨ ರಲ್ಲಿ.

ಇಷ್ಟರಲ್ಲಿ, ಸೆಲ್ಯುಕಸನು[೧] ಮತ್ತೊಮ್ಮೆ ಭಾರತವನ್ನು ಗೆಲ್ಲುವ ಆಶೆಯಿಂದ ದಾಳಿಗಾಗಿ ಬಂದನು. ಚಂದ್ರಗುಪ್ತನು ಅವನನ್ನು ಪಂಜಾಬ ದಲ್ಲಿಯೇ ಎದುರಿಸಿದನು. ಆಗ ಸೆಲ್ಯುಕಸನು ಚಂದ್ರಗುಪ್ತನ ಮುಂದೆ ತನ್ನ ಆಟವು ಸಾಗದೆಂದು ಮನದಂದು ಅವನೊಂದಿಗೆ ಒಪ್ಪಂದ ಮಾಡಿಕೊಂಡನು. ಅದರ ಮೇರೆಗೆ, ತನ್ನ ರಾಜ್ಯದ ಕಾಬೂಲ, ಕಂದಹಾರ, ಹಿರಾತ, ಕೆಲಾತ ಗಳೆಂಬ ನಾಲ್ಕು ಪ್ರಾಂತಗಳನ್ನು[೨] ಚಂದ್ರಗುಪ್ತನಿಗೆ ಕೊಟ್ಟು ಅವನನ್ನು ಭಾರತದ ಸ್ವತಂತ್ರ ರಾಜನೆಂದು ಒಪ್ಪಿಕೊಂಡನು. ಇದಕ್ಕಾಗಿ ಚಂದ್ರ ಗುಪ್ತನಿಂದ ಅವನಿಗೆ ೫೦೦ ಆನೆಗಳು ಕಾಣಿಕೆಯಾಗಿ ದೊರೆತವು. ಸೆಲ್ಯು ಕಸನು ತನ್ನ ಮಗಳನ್ನು ಚಂದ್ರಗುಪ್ತನಿಗೆ ಮದುವೆಮಾಡಿಕೊಟ್ಟನು. ( ಚಿತ್ರ ೨ ನೋಡಿರಿ ). ಮೆಗಸ್ತನೀಸ[೩] ಎಂಬ ಗ್ರೀಕ ಸರದಾರನನ್ನು ತನ್ನ ರಾಯಭಾರಿಯಾಗಿ ಚಂದ್ರಗುಪ್ತನ ಆಸ್ಥಾನಕ್ಕೆ ( ರಾಜಧಾನಿಯಾದ ಪಾಟಲೀಪುತ್ರಕ್ಕೆ ) ಕಳುಹಿಕೊಟ್ಟನು. ಒಟ್ಟಾರೆ, ಚಂದ್ರಗುಪ್ತನ ಆಳಿಕೆಯ ಕೊನೆಯ ಭಾಗದಲ್ಲಿ, ಅಫಗಾನಿಸ್ತಾನ, ಬಲೂಚಿಸ್ತಾನ ಮತ್ತು ಇಡಿ ಉತ್ತರ ಭಾರತ [ ಪಂಜಾಬದಿಂದ ಬಂಗಾಲದಲ್ಲಿ ಗಂಗಾನದಿಯ ಮುಖಜ ಭೂಮಿಯ ( ಡೆಲ್ಟಾ ) ವರೆಗೆ ] ಇವು ಅವನ ಸಾಮ್ರಾಜ್ಯದ ಭಾಗಗಳಾ ದವು ( ಚಿತ್ರ ೩ ನೋಡಿರಿ ).

**ಚಂದ್ರಗುಪ್ತನ ಕಾಲದ ಸಾಮಾಜಿಕ ಪರಿಸ್ಥಿತಿ.** ( ಅರ್ಥಶಾಸ್ತ್ರ[೪] ಮತ್ತು ಮೆಗಸ್ತನೀಸನ ಬರಹಗಳಲ್ಲಿ ಕಂಡು ಬರುವ ಮೇರೆಗೆ ):—

ಆ ಕಾಲದ ಸಮಾಜದಲ್ಲಿ ಏಳು ವಿಭಾಗಗಳಿದ್ದವು (ಚಿತ್ರ ೪ ನೋಡಿರಿ).

---

೧. ಸಿಕಂದರನು ಮಧ್ಯಏಶಿಯಾದಲ್ಲಿ ಗೆದ್ದ ಪ್ರದೇಶಗಳಿಗೆ ಇವನು ಉತ್ತರಾಧಿ ಕಾರಿಯಾಗಿದ್ದನು.

೨. ಈಗಿನ ಅಫಗಾನಿಸ್ತಾನ ಮತ್ತು ಬಲೂಚಿಸ್ತಾನಗಳನ್ನು

೩. ಇವನು ಎಷ್ಟೋ ವರುಷ ಪಾಟಲೀಪುತ್ರದಲ್ಲಿದ್ದು ತನಗೆ ಕಂಡುಬಂದ ಸಂಗತಿ ಗಳನ್ನು ವಿವರವಾಗಿ ಬರೆದಿಟ್ಟಿರುವನು. ಚಂದ್ರಗುಪ್ತನ ಕಾಲದ ಸಂಗತಿಗಳನ್ನು ತಿಳಿದುಕೊಳ್ಳಲಿಕ್ಕೆ ಇವನ ಗ್ರಂಥವು ಐತಿಹಾಸಿಕ ಆಧಾರವೆಂದು ತಿಳಿಯಲಾಗುತ್ತದೆ.

೪. ಇದು ಚಂದ್ರಗುಪ್ತನ ಮಂತ್ರಿಯಾದ ಚಾಣಕ್ಯನಿಂದ ರಚಿತವಾದ ಗ್ರಂಥ. ಇವ ನಿಗೆ ಕೌಟಿಲ್ಯನೆಂದೂ ಹೆಸರಿತ್ತು. ಚಂದ್ರಗುಪ್ತನ ರಾಜ್ಯದಾಡಳಿತೆಯ ಎಷ್ಟೋ ಸಂಗತಿಗಳು ಈ ಗ್ರಂಥದಿಂದ ತಿಳಿದುಬರುತ್ತವೆ. ಚಂದ್ರಗುಪ್ತನ ಕಾಲದ ಬಗೆಗೆ ಇದೂ ಒಂದು ಐತಿಹಾಸಿಕ ಆಧಾರ.

( ಇವನ್ನೇ ಮೆಗಸ್ತನೀಸನು ತನ್ನ ಗ್ರಂಥದಲ್ಲಿ ಏಳು ಜಾತಿಗಳೆಂದು ಕಾಣಿಸಿರುವನು.) ಅವು ಯಾವವೆಂದರೆ—

೧. **ತತ್ತ್ವಜ್ಞಾನಿಗಳು**:—ಇವರು ಬ್ರಾಹ್ಮಣರು. ಸದಾ ವಿದ್ಯಾರ್ಜನೆ ಹಾಗು ತತ್ತ್ವಚಿಂತನೆಗಳಲ್ಲಿ ಕಾಲ ಕಳೆಯುತ್ತಿದ್ದರು. ಇವರಿಗೆ ರಾಜನ ಹಾಗು ಧನಿಕರ ಆಶ್ರಯವಿತ್ತು. ಜನರ ಸಭೆಯಲ್ಲಿ ಇವರು ವರುಷದ ಮಳೆ, ಗಾಳಿಗಳ ಬಗೆಗೆ ಸೂಚನೆಗಳನ್ನು ಕೊಟ್ಟು ಜನರು ಮುಂಜಾಗ್ರತೆ ವಹಿಸುವಂತೆ ಮಾಡುತ್ತಿದ್ದರು. ಸಮಾಜದಲ್ಲಿ ಇವರಿಗೆ ವಿಶೇಷ ಗೌರವ ಸಲ್ಲುತ್ತಿತ್ತು.

೨. **ಒಕ್ಕಲಿಗರು**:—ಇವರು ಜನತೆಗೆ ಅಗತ್ಯವಿದ್ದ ಆಹಾರವಸ್ತುಗಳನ್ನು ಬೆಳೆದರು. ಅದಕ್ಕಾಗಿ ಇವರನ್ನು ಅನ್ನದಾತರೆಂದು ಭಾವಿಸಲಾಯಿತು. ಸರಕಾರದಿಂದ ಇವರಿಗೆ ಎಷ್ಟೋ ಸವಲತ್ತುಗಳೂ ದೊರೆತವು. ಇವರು ನೀರಾವರಿಯಿಂದ ವರುಷದಲ್ಲಿ ಎರಡು ಸಾರೆ ಭೂಮಿಗಳನ್ನು ಸಾಗು ಮಾಡಿ ಬೆಳೆಗಳನ್ನು ತೆಗೆದುಕೊಳ್ಳುತ್ತಿದ್ದರು. ಭಾರತದಲ್ಲಿ ಎಂದೂ ಬರಗಾಲವಿಲ್ಲವೆಂದು ಮೆಗಸ್ತನೀಸನು ಬರೆದಿಟ್ಟಿರುವದಕ್ಕೆ ಇದುವೆ ಕಾರಣವಿರಬಹುದು.

೩. **ವನ ಕಾಯುವವರು ಹಾಗು ಬೇಟೆಗಾರರು**:—ಹೊಲಗಳನ್ನು ವನ್ಯ (ಕಾಡು) ಪಶು—ಪಕ್ಷಿಗಳಿಂದ ರಕ್ಷಿಸುವದು ಇವರ ವಿಶೇಷ ಹೊಣೆಗಾರಿಕೆಯಿತ್ತು. ಇದಕ್ಕಾಗಿ ಸರಕಾರವು ಇವರಿಗೆ ಧಾನ್ಯರೂಪದಿಂದ ಸಹಾಯ ಮಾಡುತ್ತಿತ್ತು.

೪. **ವ್ಯಾಪಾರಿಗಳು ಹಾಗು ಶಿಲ್ಪಕಾರರು** (ಕಸಬುದಾರರು) :— ವ್ಯಾಪಾರಿಗಳಿಗಾಗಿ ಮೌರ್ಯ ಸರಕಾರವು ಮಾರ್ಗಸೌಕರ್ಯಗಳನ್ನು ಮಾಡಿ ಕೊಟ್ಟಿತಲ್ಲದೆ, ನದಿಗಳ ಮೇಲಿನ ವ್ಯಾಪಾರದ ಅನುಕೂಲತೆಗಾಗಿ ಹಡಗುಗಳನ್ನು ಕಟ್ಟಿ ಬಾಡಿಗೆಯಿಂದ ಕೊಡುತ್ತಿತ್ತು. ಕಸಬುಗಾರರು ಒಕ್ಕಲಿಗರಿಗೆ ಒಕ್ಕಲುತನದ ಸಲಕರಣೆಗಳನ್ನೂ ಸೈನಿಕರಿಗೆ ಯುದ್ಧ ಸಲಕರಣೆಗಳನ್ನೂ ತಯಾರಿಸಿ ಕೊಡಬೇಕಾಗುತ್ತಿತ್ತು. ಅವಶ್ಯಬಿದ್ದಾಗ ಸರಕಾರಕ್ಕೂ ತಮ್ಮ ಸೇವೆಯನ್ನು ಸಲ್ಲಿಸಬೇಕಾಗುತ್ತಿತ್ತು. ಇದರ ಸಲುವಾಗಿ, ಸರಕಾರವು

ಅವರಿಂದ ಕರವಸೂಲಿ ಮಾಡುತ್ತಿದ್ದಿಲ್ಲ. ಪ್ರತಿಯಾಗಿ, ಸರಕಾರದ ಬೊಕ್ಕಸ ದಿಂದ ಅವರಿಗೆ ಧನ ಸಹಾಯ ಸಿಗುತ್ತಿತ್ತು.

೫. **ಸೈನಿಕರು :—** ಸೈನ್ಯದಲ್ಲಿ ಸೇರಲಿಕ್ಕೆ ಜಾತಿಯ ನಿರ್ಬಂಧವಿರಲಿಲ್ಲ.

೬. **ಗುಪ್ತಚಾರರು :—**ಇವರು ರಾಜ್ಯದಲ್ಲಿಯ ದೂರದೂರದ ಪ್ರಾಂತಗಳಲ್ಲಿಯ ಸುದ್ದಿಗಳನ್ನು ಕೂಡ ಅರಸನ ಕಿವಿಗೆ ಮುಟ್ಟಿಸುತ್ತಿದ್ದರು. ಇವರು ಮೌರ್ಯ ಸಾಮ್ರಾಜ್ಯಕ್ಕೆ ಆಧಾರಸ್ತಂಭಗಳಾಗಿದ್ದರು ಎಂದು ಎನ್ನ ಬಹುದು.

೭. **ಮಂತ್ರಿಗಳು ಹಾಗು ಮಿಕ್ಕ ಅಧಿಕಾರಿ-ವರ್ಗ:—**ಶ್ರೇಷ್ಠ ಜನ ರನ್ನೇ ಮಂತ್ರಿಗಳನ್ನಾಗಿ ಆರಿಸಲಾಗುತ್ತಿತ್ತು. ಅಧಿಕಾರಿವರ್ಗಗಳಲ್ಲಿ ಚಿಕ್ಕ ದೊಡ್ಡ ಎಲ್ಲ ದರ್ಜೆಯ ಅಧಿಕಾರಿಗಳಿದ್ದರು. ಅಧಿಕಾರಿಗಳನ್ನು ನೇಮಿಸುವಾಗ ಜಾತಿಯು ಅಡ್ಡ ಬರುತ್ತಿದ್ದಿಲ್ಲ. ಹೊರನಾಡಿನವರಿಗೂ ಹುದ್ದೆಗಳು ದೊರೆಯು ತ್ತಿದ್ದವು.

**ಸ್ತ್ರೀಯರ ಸ್ಥಾನ-ಮಾನಗಳು :—**

ಕೆಲವು ಸ್ತ್ರೀಯರು ಲಗ್ನವಾಗದೆ ಬ್ರಹ್ಮಚರ್ಯದಿಂದಿದ್ದು ತತ್ತ್ವಚಿಂತನೆ ಯಲ್ಲಿ ಕಾಲಕಳೆಯುತ್ತಿದ್ದರು. ವಿವಾಹಿತ ಸ್ತ್ರೀಯರಿಗೆ ವೇದಾಧ್ಯಯನದ ಅಧಿಕಾರವಿರಲಿಲ್ಲ. ಆದರೆ ಅವರು ಗಂಡಂದಿರೊಡನೆ ಮನೆಯಲ್ಲಿಯೇ ಧರ್ಮಾ ಚರಣೆಗಳಲ್ಲಿ ಭಾಗವಹಿಸುತ್ತಿದ್ದರೆಂದು ತೋರುತ್ತದೆ. ಏಕಪತ್ನೀತ್ವವು ಸಾಮಾನ್ಯ ರೂಢಿಯಲ್ಲಿತ್ತು. ಆದರೆ ಬಹುಪತ್ನೀತ್ವವು ನಿಷಿದ್ಧವಿರಲಿಲ್ಲ.[೧] ಹೆಂಗಸರು ಪತಿವ್ರತೆಯರಿದ್ದರು; ಸಮಾಜದಲ್ಲಿ ಅವರಿಗೆ ಗೌರವವಿತ್ತು. ಸ್ತ್ರೀಯರೇ ಅರಸನ ಅಂಗರಕ್ಷಕರು.

**ಗುಲಾಮಗಿರಿ (ದಾಸ್ಯ) :—**

ಆಗಿನ ಸಮಾಜದಲ್ಲಿ ದಾಸ್ಯ ಪದ್ಧತಿಯು ಸ್ಥಿರಗೊಂಡಿತ್ತೆಂದು ಕೆಲವು ವಿದ್ವಾಂಸರು ಅಭಿಪ್ರಾಯಪಡುವರು.

೧. ಬಹುಪತ್ನೀತ್ವವು. ವಿಶೇಷವಾಗಿ ರಾಜರಲ್ಲಿ ಮತ್ತು ಶ್ರೀಮಂತ ಸರದಾರರಲ್ಲಿ ಕಣ್ಣಿಗೆ ಬೀಳುತ್ತಿತ್ತು.

**ಆಹಾರ-ವಿಹಾರಗಳು :—**

ಅಕ್ಕಿಯೇ ಮುಖ್ಯ ಆಹಾರವಾಗಿತ್ತು. ಸಾಮಾನ್ಯ ಜನರು ಅಕ್ಕಿಯಿಂದ ತಯಾರಿಸಿದ ಮದ್ಯವೊಂದನ್ನು ಪೇಯವಾಗಿ ಉಪಯೋಗಿಸುತ್ತಿದ್ದರು. ಯಜ್ಞಯಾಗಾದಿಗಳಲ್ಲಿ ಹೊರತುಪಡಿಸಿ, ಎಂದೂ ಸರಾಯಿ ಕುಡಿಯುತ್ತಿದ್ದಿಲ್ಲ. ಮಾಂಸಸೇವನೆಯು ಇನ್ನೂ ರೂಢಿಯಲ್ಲಿತ್ತೆಂದು ತೋರುತ್ತದೆ.

ಬೇಟೆಯು ರಾಜನ ಮುಖ್ಯ ವಿನೋದವಾಗಿತ್ತು. ಆಗ ಅವನಿಗೆ ಸ್ತ್ರೀಯರು ಅಂಗರಕ್ಷಕರಿರುತ್ತಿದ್ದರು. ಸಮಾಜದಲ್ಲಿ ಮನೋರಂಜನೆಗಾಗಿ ಪಂದ್ಯಾಟಗಳೂ, ಕುಸ್ತಿಗಳೂ, ಇತರ ವಿವಿಧ ಕಾದಾಟಗಳೂ ಮೇಲಿಂದ ಮೇಲೆ ನಡೆಯುತ್ತಿದ್ದವು. ದ್ಯೂತ (ಲೆತ್ತದಾಟ)ವೂ ಮನೋರಂಜನೆಯ ಸಾಧನೆಯಾಗಿತ್ತು. ದ್ಯೂತ, ಮದ್ಯಪಾನಗಳ ಮೇಲೆ ಸರಕಾರವು ಬಲವಾದ ನಿರ್ಬಂಧಗಳನ್ನು ಹೇರಿತ್ತು.

**ಉಡಿಗೆ-ತೊಡಿಗೆ :—**

ಸಾಧಾರಣವಾಗಿ ಜನರ ಮೈಮೇಲಿನ ಬಟ್ಟೆಗಳು ಹತ್ತಿಯ ತಿಳುವಾದ ಶುಭ್ರ ವಸ್ತ್ರಗಳು. ಅವುಗಳ ಮೇಲೆ ಅಲಂಕಾರಕ್ಕಾಗಿ ಹಾಕಿದ ಕಸೂತಿ ಕೆಲಸವು ಕಂಡುಬರುತ್ತಿತ್ತು. ಸಿರಿವಂತರು ಆಭರಣಗಳನ್ನು ತೊಟ್ಟುಕೊಳ್ಳುತ್ತಿದ್ದರು. ಸಂಚಾರಕ್ಕೆ ಹೊರಟಾಗ ಸೇವಕರಿಂದ ಕೊಡೆ ಹಿಡಿಸಿಕೊಳ್ಳುತ್ತಿದ್ದರು. ಕೆಲವರು ನಾಲ್ಕು ಕುದುರೆಗಳ ರಥದಲ್ಲಿ ಕುಳಿತು ಸಂಚಾರ ಮಾಡುತ್ತಿದ್ದರು.

**ಉದ್ಯೋಗ :—**

ಒಕ್ಕಲುತನ ಮತ್ತು ಕೈಗಾರಿಕೆಗಳು ಮುಖ್ಯ ಉದ್ಯೋಗಗಳಾಗಿದ್ದವು. ಇವುಗಳಲ್ಲಿ ಅವರು ಕುಶಲರಿದ್ದರು. ಪಟ್ಟಣಗಳಲ್ಲಿ ಬೆಳ್ಳಿಬಂಗಾರದ ಆಭರಣಗಳು ತಯಾರಾಗುತ್ತಿದ್ದವು. ಒಕ್ಕಲುತನದ ಹಾಗು ಯುದ್ಧದ ಸಲಕರಣೆಗಳಲ್ಲದೆ, ವ್ಯಾಪಾರ ಮತ್ತು ನೀರಿನ ಮೇಲಿನ ಸಂಚಾರಕ್ಕಾಗಿ ಹಡಗುಗಳೂ ತಯಾರಾಗುತ್ತಿದ್ದವು.

**ವ್ಯಾಪಾರ :—**

ವ್ಯಾಪಾರವು ಊರ್ಜಿತಾವಸ್ಥೆಯಲ್ಲಿತ್ತು. ಭಾರತವು ಸಿರಿಯಾ

ಇಜಿಪ್ತ ಮುಂತಾದ ಪರದೇಶಗಳೊಂದಿಗೆ ವ್ಯಾಪಾರ ಸಂಬಂಧವನ್ನು ಬೆಳೆಸಿತು. ವ್ಯಾಪಾರಕ್ಕಾಗಿ ಬಂದು ನೆಲೆಸಿದ ಎಷ್ಟೋ ವಿದೇಶೀಯರು ರಾಜಧಾನಿಯಾದ ಪಾಟಲೀಪುತ್ರದಲ್ಲಿ ಕಣ್ಣಿಗೆ ಬೀಳುತ್ತಿದ್ದರು.

**ಧರ್ಮ:—**

ವೈದಿಕಧರ್ಮ, ಬೌದ್ಧ ಮತ್ತು ಜೈನ ಧರ್ಮಗಳು ಆಚರಣೆಯಲ್ಲಿದ್ದವು. ಆದರೆ ಕೆಲವು ಭಾಗಗಳಲ್ಲಿ ಬೌದ್ಧಧರ್ಮವು ಹೆಚ್ಚು ಪ್ರಭಾವವನ್ನು ಬೀರ ಹತ್ತಿತು. ಚಂದ್ರಗುಪ್ತನು ತನ್ನ ಆಳಿಕೆಯ ಕೊನೆಯ ಭಾಗದಲ್ಲಿ[1] ಜೈನ ಯತಿಯಾದ ಭದ್ರಬಾಹುವಿನ ಉಪದೇಶದಿಂದ ಜೈನಧರ್ಮವನ್ನು ಸ್ವೀಕರಿಸಿ ತನ್ನ ಸಿಂಹಾಸನವನ್ನು ಬಿಂದುಸಾರನೆಂಬ ಮಗನಿಗೆ ಬಿಟ್ಟುಕೊಟ್ಟನು; ಮತ್ತು ಶ್ರವಣಬೆಳಗುಳಕ್ಕೆ[2] ಬಂದು ನೆಲಸಿ, ಅಲ್ಲಿಯೇ ದೇಹಬಿಟ್ಟನೆಂದು ತಿಳಿಯಲಾಗುತ್ತದೆ.

**ಚಂದ್ರಗುಪ್ತನ ರಾಜ್ಯದಾಡಳಿತೆ:—**

ಚಂದ್ರಗುಪ್ತನಿಗೆ ಮೊದಲಿನಿಂದಲೂ ಸಹಾಯಕನಾಗಿದ್ದ ಚಾಣಕ್ಯನೆ ಮುಖ್ಯ ಮಂತ್ರಿಯಾದನು. ಆಡಳಿತೆಯ ಶಾಖೆಗಳಲ್ಲಿ[3] ರಾಜನೆ ಎಲ್ಲರಿಗೂ ಮೇಲಧಿಕಾರಿಯೆನಿಸಿದನು. ಎಷ್ಟೋ ಸಲ, ಆಡಳಿತೆಗೆ ಸಂಬಂಧಿಸಿದ ಸಾಮಾನ್ಯ ಧೋರಣೆಗಳನ್ನು ರಾಜನೇ ಗೊತ್ತುಪಡಿಸಿ 'ರಾಜಾಜ್ಞೆ'ಗಳನ್ನು ಹೊರಡಿಸುತ್ತಿದ್ದನು. ಗುಪ್ತಚಾರರ ಸಹಾಯದಿಂದ ಸಾಮ್ರಾಜ್ಯದಲ್ಲಿಯ ದೂರದ ಅಧಿಕಾರಿಗಳನ್ನೂ ಅಂಕಿತದಲ್ಲಿಟ್ಟುಕೊಂಡನು. ಹೀಗಿದ್ದರೂ, ಚಂದ್ರ ಗುಪ್ತನು ನಿರಂಕುಶ ಪ್ರಭುವೆನಿಸಲಿಲ್ಲ. ಅವನು ಪರಂಪರೆಯಿಂದ ಬಂದ ರೂಢಿಗಳನ್ನು ಗೌರವಿಸಿದನು; ಮಂತ್ರಿಗಳಿಂದ ಸಲಹೆ ಪಡೆದನು; ಪ್ರಜಾ ಮತಕ್ಕೆ ಮನ್ನಣೆಯಿತ್ತನು. 'ಮತಿಸಚಿವರು' (ಅರಸನ ಮಂತ್ರಿಗಳು) ರಾಜಧಾನಿಯಲ್ಲಿದ್ದು ಅರಸನಿಗೆ ಸಲಹೆ ಕೊಟ್ಟರು; ಹಾಗು ಕಟ್ಟಳೆಗಳನ್ನು ಮಾಡುವದರಲ್ಲಿ ಮತ್ತು ಅವುಗಳನ್ನು ಬಳಕೆಯಲ್ಲಿ ತರುವದರಲ್ಲಿ ಅವನಿಗೆ

---

೧. ಕ್ರಿ ಪೂ. ೨೯೮ ರಲ್ಲಿ

೨. ಮೈಸೂರ ಪ್ರಾಂತದಲ್ಲಿ

೩. ಯುದ್ಧ, ನ್ಯಾಯದಾನ, ವರಿಷ್ಠಾಧಿಕಾರಿಗಳ ನೇಮಕ ಮುಂತಾದವುಗಳಲ್ಲಿ

ಸಹಾಯಕರಾದರು. ಆಡಳಿತೆಯಲ್ಲಿ ಯುವರಾಜ, ಪುರೋಹಿತ ಮತ್ತು ಸೇನಾಪತಿಗಳಿಗೆ ಮುಖ್ಯತೆ ಇತ್ತು.

ಆಡಳಿತೆಯ ಸೌಕರ್ಯಕ್ಕಾಗಿ ರಾಜ್ಯದಲ್ಲಿ ಪ್ರಾಂತ, ವಿಷಯ (ಜಿಲ್ಹೆ), ಗ್ರಾಮಗಳೆಂಬ ವಿಭಾಗಗಳಿದ್ದವು. ಗ್ರಾಮವೆ ತೀರ ಚಿಕ್ಕ ವಿಭಾಗ. ಪ್ರಾಂತದ ಮುಖ್ಯಾಧಿಕಾರಿಗೆ 'ಪ್ರತಿನಿಧಿ'ಯೆಂದು ಹೆಸರು. ಅವನು ಬಹುತರ ರಾಜ ಮನೆತನಕ್ಕೆ ಸಂಬಂಧಿಸಿದವನು. ರಾಜನಂತೆ, ಅವನಿಗಾದರೂ ಸಲಹೆಗಾಗಿ ಮಂತ್ರಿಮಂಡಲವಿತ್ತು. '**ಮಹಾಮಾತ್ರ**'ರೆಂಬ ದೊಡ್ಡ ಅಧಿಕಾರಿಗಳಿದ್ದರು.

ಹಳ್ಳಿಯ ಪಂಚರು (ಹಳ್ಳಿಗರಿಂದ ಆರಿಸಲ್ಪಟ್ಟ ಮುಂದಾಳುಗಳು) ಅಲ್ಲಿಯ ಸಣ್ಣಪುಟ್ಟ ವ್ಯಾಜ್ಯಗಳನ್ನು ಬಗೆಹರಿಸುತ್ತಿದ್ದರು. ಹಳ್ಳಿನಾಡಿನ ಆಡಳಿತೆಗಾಗಿ 'ಜನಪದ' ಎಂಬ ಸ್ಥಾನಿಕ ಸಂಸ್ಥೆಯಿತ್ತು. ಹಳ್ಳಿಗಳ ಪಂಚರೂ ಮತ್ತು ಕೆಲವು ಸರಕಾರಿ ಅಧಿಕಾರಿಗಳೂ ಇದರ ಸದಸ್ಯರಿರುತ್ತಿದ್ದರು. ಸ್ಥಾನಿಕ ಆಡಳಿತೆಯ ಕೆಲವು ವಿಷಯಗಳನ್ನು[೧] ಜನಪದಗಳಿಗೆ ಬಿಟ್ಟುಕೊಡಲಾಗಿತ್ತು. ನ್ಯಾಯದಾನಕ್ಕಾಗಿ ದೊಡ್ಡ ಪಟ್ಟಣಗಳಲ್ಲಿ ಹಾಗು ಹಳ್ಳಿನಾಡುಗಳಲ್ಲಿ ಪ್ರತ್ಯೇಕ **ನ್ಯಾಯದಾನ ಮಂಡಲ**ಗಳಿದ್ದವು. '**ರಜ್ಜುಕ**'ರೆಂಬ ಅಧಿಕಾರಿಗಳು ಇವುಗಳ ಅಧ್ಯಕ್ಷರು. ಅಪರಾಧಗಳಿಗೆ ಉಗ್ರಶಾಸನಗಳಿದ್ದವು. ಆದರೆ ಅಪ ರಾಧಗಳು ಕಡಿಮೆ ಇದ್ದವು. ಈ ವಿಷಯದಲ್ಲಿ ಮೆಗಸ್ತನೀಸನು ಹೀಗೆ ಬರೆದಿಟ್ಟಿರುವನು : ''ಹಿಂದುಸ್ತಾನದ ಜನರು ಬಹಳ ಪ್ರಾಮಾಣಿಕರು. ಸುಳ್ಳು ಹೇಳುವದಿಲ್ಲ. ಮೋಸ ಮಾಡುವದಿಲ್ಲ. ತಮ್ಮ ಮನೆಗಳಿಗೆ ಬೀಗ ಹಾಕುವದಿಲ್ಲ. ನ್ಯಾಯಾಲಯಗಳಿಗೆ ಹೋಗುವದು ಅಪರೂಪ........''

ರಾಜಧಾನಿಯ ಆಡಳಿತೆಗಾಗಿ ಪಾಟಲಿಪುತ್ರದಲ್ಲಿ ೩೦ ಸದಸ್ಯರ ನಗರ-ಸಮಿತಿಯೊಂದಿತ್ತು. ಇದರಲ್ಲಿ ಐದೈದು ಸದಸ್ಯರ ಆರು ಉಪಸಮಿತಿಗಳನ್ನು ನಿರ್ಮಿಸಿ ಆಡಳಿತೆಯ ಶಾಖೆಗಳನ್ನು ಹಂಚಿಕೊಡಲಾಗಿತ್ತು. ಕೈಗಾರಿಕೆ, ವಸ್ತುಗಳ ಬೆಲೆ ನಿರ್ಣಯ, ತೂಕ–ಅಳತೆ, ಜನನ–ಮರಣ, ಕರವಸೂಲಿ, ವಿದೇಶೀಯರ ಹಿತ, ಇವೇ ಆ ಶಾಖೆಗಳು.

---

೧. ಕಟ್ಟಳೆಯನ್ನು ಮಾಡುವದು, ನ್ಯಾಯದಾನ ಮುಂತಾದವುಗಳನ್ನು

ಬೇಸಾಯದ ಹಿತರಕ್ಷಣೆಗಾಗಿ ಪ್ರತ್ಯೇಕವಾದ ಶಾಖೆಯೊಂದನ್ನು ಏರ್ಪಡಿಸಲಾಗಿತ್ತು. ಇದು ಭೂಮಿಯ ಅಳತೆ, ನೀರಾವರಿ, ಒಕ್ಕಲಿಗರಿಗೆ ಸಹಾಯ, ಕಂದಾಯ ವಸೂಲಿ, ರಸ್ತೆ ತಯಾರಿಸುವದು, ಮೈಲುಗಂಬ ಗಳನ್ನು ನೆಡುವದು ಮುಂತಾದ ಕಾರ್ಯಗಳನ್ನು ನೋಡಿಕೊಂಡಿತು.

**ಸೈನ್ಯ :—**

ಚಂದ್ರಗುಪ್ತನು ತನ್ನ ವಿಶಾಲವಾದ ರಾಜ್ಯದ ಸಂರಕ್ಷಣೆಗೆ ದೊಡ್ಡ ಸೈನ್ಯ ವನ್ನು[೧] ಕಟ್ಟಿಕೊಂಡನು. ಅದರಲ್ಲಿ ಆನೆ, ಕುದುರೆ, ರಥ, ಕಾಲಾಳುಗಳೂ ಮತ್ತು ಹಡಗುಪಡೆಯೂ ಇದ್ದವು. ಸೈನ್ಯದ ಮೇಲ್ವಿಚಾರಣೆಯನ್ನು ೩೦ ಸದಸ್ಯರ ಸಮಿತಿಯೊಂದಕ್ಕೆ ಒಪ್ಪಿಸಲಾಗಿತ್ತು. ಬಿಲ್ಲು–ಬಾಣ, ಚೂರಿ, ಕತ್ತಿ, ಈಟಿ, ಕೊಡಲಿ, ಅಂಕುಶ, ಢಾಲುಗಳು ಆಗಿನ ಯುದ್ಧಾಯುಧಗಳೆನಿಸಿದವು. ಯುದ್ಧಗಳಲ್ಲಿ ಬಹುತರ ರಾಜನೆ ಸೈನ್ಯದ ಮುಂದಾಳಾಗುತ್ತಿದ್ದನು.

ಭೂಕಂದಾಯ, ಸುಂಕ, ವ್ಯಾಪಾರೋದ್ಯೋಗಗಳ ಮೇಲಿನ ಕರ, ಜನನ–ಮರಣ ಕರ, ದಂಡ ಮುಂತಾದವು ರಾಜನಿಗೆ ಆದಾಯದ ಮುಖ್ಯ ಬಾಬುಗಳಾಗಿದ್ದವು. ಸೈನ್ಯ, ನೀರಾವರಿ, ಮಾರ್ಗಸೌಕರ್ಯ ಇವು ವೆಚ್ಚದ ಮುಖ್ಯ ವಿಷಯಗಳಾಗಿದ್ದವು.

**ರಾಜವೈಭವ :—**

ಚಂದ್ರಗುಪ್ತನು ವೈಭವಪ್ರಿಯನಿದ್ದನು. ಅರಮನೆಯಲ್ಲಿ ಮತ್ತು ಒಡ್ಡೋಲಗಗಳಲ್ಲಿ ಅವನ ವೈಭವಸೂಚಕ ಚಿಹ್ನಗಳು ವಿಶೇಷವಾಗಿ ಕಂಡು ಬರುತ್ತಿದ್ದವು. ಅರಮನೆಯ ಕಂಬಗಳಿಗೆ ಬಂಗಾರದ ಬಳ್ಳಿಗಳ ಹಾಗು ಬೆಳ್ಳಿಯ ಹಕ್ಕಿಗಳ ಅಲಂಕಾರವಿತ್ತು. ಆರು ಅಡಿ ಅಗಲದ ಚಿನ್ನದ ಪಾತ್ರೆ ಗಳು ಉಪಯೋಗದಲ್ಲಿದ್ದವು.

## ಅಭ್ಯಸನಗಳು.

೧. ಚಿತ್ರ ೪ ರಲ್ಲಿ ಕಂಡುಬರುವ ಕಸಬುದಾರರು ಯಾರು ಯಾರೆಂಬ ದನ್ನು ಗುರುತಿಸಿರಿ.

೧. ಆನೆಗಳು, ೯೦೦೦; ರಾವುತರು, ೩೦,೦೦೦; ರಥಗಳು, ೯೦೦೦; ಕಾಲಾಳುಗಳು, ೬,೦೦,೦೦೦ (ಆರು ಲಕ್ಷ).

೨. ಚಂದ್ರಗುಪ್ತ ಮತ್ತು ಸೆಲ್ಯೂಕಸರ ನಡುವೆ ಆದ ಒಪ್ಪಂದದ ಕರಾರುಗಳನ್ನು ಯೋಗ್ಯ ಒಕ್ಕಣಿಕೆ ಮುಂತಾದವುಗಳಿಂದ ಕೂಡಿದ ಪತ್ರರೂಪದಲ್ಲಿ ಬರೆಯಿರಿ. ( ಪತ್ರವು ಸೆಲ್ಯೂಕಸನು ಬರೆದಂತೆ ಇರಬೇಕು. )

೩. ಚಾಣಕ್ಯನಿಂದ ಚಂದ್ರಗುಪ್ತನಿಗಾದ ನೆರವನ್ನು ತಿಳಿಸುವ ಉದ್ದೇಶದಿಂದ, ನೀವೇ ಚಾಣಕ್ಯನೆಂದು ಕಲ್ಪಿಸಿ, ನಿಮ್ಮ ಗೆಳೆಯನೊಬ್ಬನಿಗೆ ಪತ್ರ ಬರೆಯಿರಿ.

೪. ಭಾರತದ ಬಾಹ್ಯರೇಷೆಯ ನಕಾಶದಲ್ಲಿ ಚಂದ್ರಗುಪ್ತನ ಸಾಮ್ರಾಜ್ಯವನ್ನು ಗುರುತು ಮಾಡಿರಿ.

# ೮ನೆಯ ಪ್ರಕರಣ



ಚಿತ್ರ ೧. [illegible] ಅಶೋಕ.



ಚಿತ್ರ ೨. ಅಶೋಕನ ಬೌದ್ಧಧರ್ಮ ಸ್ವೀಕಾರ.



ಚಿತ್ರ ೪. ಸಾರನಾಥದಲ್ಲಿಯ ಅಶೋಕಸ್ತಂಭಾಗ್ರ.



ಚಿತ್ರ ೫. ಸಾಂಚಿಯ ಮಹಾಸ್ತೂಪ.

ಚಿತ್ರ ೭. ಅಶೋಕನ ಧರ್ಮದಿಗ್ವಿಜಯ.



# ೮ನೆಯ ಪ್ರಕರಣ

## ಅಶೋಕ (ಕ್ರಿ. ಪೂ. ೨೭೩ರಿಂದ ಕ್ರಿ. ಪೂ. ೨೩೨ರ ವರೆಗೆ)

(ಮಹಾತ್ಮನಾದ ಅಶೋಕ, ಅವನ ಶಾಂತಿಪ್ರಚಾರಗಳು
ಮತ್ತು ಧರ್ಮದಿಗ್ವಿಜಯ)

ಅಶೋಕನು ಚಂದ್ರಗುಪ್ತನ ಮೊಮ್ಮಗ (ಬಿಂದುಸಾರನೆಂಬ ಅವನ ಮಗನ ಮಗ). ಕ್ರಿ. ಪೂ. ೨೯೮ರಲ್ಲಿ ಚಂದ್ರಗುಪ್ತನು ಬಿಂದುಸಾರನಿಗೆ ಸಿಂಹಾಸನವನ್ನು ಬಿಟ್ಟುಕೊಟ್ಟನೆಂದು ಹಿಂದಿನ ಪ್ರಕರಣದಲ್ಲಿ ಹೇಳಲಾಗಿದೆ. ಬಿಂದುಸಾರನು ಸಮ್ರಾಟನೆಂದು ಸುಮಾರು ೨೫ ವರುಷ ರಾಜ್ಯವಾಳಿದನು. ಅವನು ತಂದೆಗೆ ತಕ್ಕ ಮಗ. ತಂದೆಯ ಸಾಮ್ರಾಜ್ಯವನ್ನು ಮತ್ತೂ ವಿಸ್ತರಿಸಿದನು. ದಕ್ಷಿಣದಲ್ಲಿ ಈಗಿನ ಮೈಸೂರಿನವರೆಗೂ ಅದು ವಿಸ್ತಾರಗೊಂಡಿತು. ಗ್ರೀಕರು ಇವನನ್ನು 'ಅಮಿತ್ರಘಾತ'ನೆಂದು ಕರೆದರು. ತಂದೆಯಂತೆ ಇವನೂ ಗ್ರೀಕ ಅರಸನೊಂದಿಗೆ ಸ್ನೇಹಸಂಬಂಧವನ್ನು ಇಟ್ಟುಕೊಂಡಿದ್ದನು. ಸೆಲ್ಯುಕಸನ ಅನಂತರ ಅವನ ಸ್ಥಳದಲ್ಲಿ ರಾಜ್ಯವಾಳಿದ "ಆಂಟಿಯುಕಸ್"ಎಂಬಾತನು ಕಳಿಸಿಕೊಟ್ಟ ಗ್ರೀಕ ರಾಯಭಾರಿಯನ್ನು ತನ್ನ ಓಲಗದಲ್ಲಿ ಇಟ್ಟುಕೊಂಡನು. ಪರಸ್ಪರರ ನಡುವೆ ಕಾಗದ ಪತ್ರಗಳ ವ್ಯವಹಾರವೂ ನಡೆಯಿತು. ಬಿಂದುಸಾರನು ಕ್ರಿ. ಪೂ. ೨೭೩ರಲ್ಲಿ ಮರಣಹೊಂದಿದನು. ಅವನಿಗೆ ಅನೇಕ ಜನ ಮಕ್ಕಳಿದ್ದರು. ಅವರಲ್ಲಿ ಸುಸೀಮ, ಅಶೋಕ, ವೀತಶೋಕರೆಂಬವರು ಮುಖ್ಯರು. ತಂದೆಯು ಅಶೋಕನನ್ನೇ ಹೆಚ್ಚಾಗಿ ಪ್ರೀತಿಸುತ್ತಿದ್ದಂತೆ ತೋರುತ್ತದೆ. ಬಿಂದುಸಾರನ ಆಳಿಕೆಯಲ್ಲಿ ಅಶೋಕನು ಮೊದಲು ತಕ್ಷಶಿಲೆಯಲ್ಲಿಯೂ ಅನಂತರ ಉಜ್ಜಯಿನಿಯಲ್ಲಿಯೂ ಪ್ರಾಂತಾಧಿಕಾರಿ (ರಾಜಪ್ರತಿನಿಧಿ)ಯಾಗಿ ಕೆಲಸ ಮಾಡಿದನು. ಉಜ್ಜಯಿನಿಯಲ್ಲಿದ್ದಾಗ, ತಂದೆಯ ಬೇನೆಯ ವಾರ್ತೆಯನ್ನು ಕೇಳಿ ರಾಜಧಾನಿಗೆ ಬಂದನು. ತಂದೆಯು ಮರಣಹೊಂದಿದ ಕೂಡಲೆ, ಅಣ್ಣನಾದ ಸುಸೀಮನನ್ನು ಬದಿಗೊತ್ತಿ ತಾನೇ ಸಿಂಹಾಸನವನ್ನು

ಆಕ್ರಮಿಸಿದನು. ಪಟ್ಟಕ್ಕಾಗಿ ಕಲಹವಾದಂತೆ ಕಾಣುತ್ತದೆ. ಏಕೆಂದರೆ ಅಶೋಕನ ರಾಜ್ಯಾಭಿಷೇಕವು ೪ ವರುಷ ತಡವಾಗಿ (ಅಂದರೆ, ಕ್ರಿ. ಪೂ. ೨೬೯ರಲ್ಲಿ ) ನಡೆಯಿತು. ಅಶೋಕನು ಶೂರನೂ ಮಹತ್ತ್ವಾಕಾಂಕ್ಷಿಯೂ ಇದ್ದನಲ್ಲದೆ, ಮೊದಮೊದಲಿಗೆ ಅವನು ಆಕ್ರಮಣಶೀಲನಿದ್ದನು.[೧] ಸಾಮ್ರಾಜ್ಯವನ್ನು ವಿಸ್ತರಿಸುವದು ಅವನಿಗೆ ಪ್ರಥಮ ಕರ್ತವ್ಯವೆನಿಸಿತು.

ತನ್ನ ಆಳಿಕೆಯ ೧೨ನೆಯ ವರುಷದಲ್ಲಿ[೨] ಅಶೋಕನು ಕಳಿಂಗದೇಶದ[೩] ಮೇಲೆ ದೊಡ್ಡ ಸೈನ್ಯಸಮೇತನಾಗಿ ದಾಳಿಮಾಡಿದನು. ಆ ರಾಜ್ಯವು ಬಲಾಢ್ಯವಿತ್ತು. ಅಲ್ಲಿ ಬಲಿಷ್ಠ ಗಜಸೈನ್ಯವಿತ್ತು. ಆದರೂ, ಯುದ್ಧದಲ್ಲಿ ಅಶೋಕನಿಗೆ ಪ್ರಚಂಡ ವಿಜಯ ದೊರೆಯಿತು. ಆದರೆ ಯುದ್ಧದಲ್ಲಿಯ ಅಪಾರ ರಕ್ತಪಾತವನ್ನೂ ಜನರ ದುಃಖಸಂಕಟಗಳನ್ನೂ ಪ್ರತ್ಯಕ್ಷವಾಗಿ ಕಂಡ ಅಶೋಕನಿಗೆ ಮನಸ್ಸಿನಲ್ಲಿ ಅತಿ ಮರುಕವೆನಿಸಿತು. ವಿಪರೀತ ಪಶ್ಚಾತ್ತಾಪವುಂಟಾಯಿತು. ಆಗಿನಿಂದ, ಅವನ ಮನಸ್ಸು—ಅಹಿಂಸೆಯೆ ಮುಖ್ಯ ಉಪದೇಶವಾಗಿದ್ದ—ಬೌದ್ಧಧರ್ಮದಲ್ಲಿ ಕುತೂಹಲವುಳ್ಳದ್ದಾಯಿತು. ಮನಸ್ಸಿನ ಈ ಪರಿಸ್ಥಿತಿಯಲ್ಲಿದ್ದ ಅಶೋಕನಿಗೆ 'ಉಪಗುಪ್ತ'ನೆಂಬ ಬೌದ್ಧ ಸಂನ್ಯಾಸಿಯ ಸಹವಾಸ ದೊರೆಯಿತು. ಅವನ ಉಪದೇಶದಿಂದ ಅಶೋಕನು ಬೌದ್ಧ ಧರ್ಮವನ್ನು ಸ್ವೀಕರಿಸಿದನು[೪] ( ಚಿತ್ರ ೪ ನೋಡಿರಿ ). ಅಂದಿನಿಂದ ಅವನು ಆ ಮತದ ತತ್ತ್ವಗಳನ್ನೆ ತಳಹದಿಯನ್ನಾಗಿಟ್ಟುಕೊಂಡು ತನ್ನ ಸ್ವಕೀಯ ಜೀವನವನ್ನೂ ತನ್ನ ಸಾರ್ವಜನಿಕ ಜೀವನವನ್ನೂ ಸಾಗಿಸಿದನು. ಹೀಗಾಗಿ, ಕೆಲವು ಕಾಲ ಕತ್ತಿಯ ಬಂಟನಾಗಿದ್ದ ಅಶೋಕನು ಮುಂದೆ 'ಅಹಿಂಸೆ'ಯೆಂಬ ಶಸ್ತ್ರದ ಬಲದಿಂದ ೨೮ ವರುಷ ರಾಜ್ಯವಾಳಿದನು. ಆದರೆ ಅವನ ಆಯುಷ್ಯದ

---

೧. ಬೌದ್ಧರ ವೃತ್ತಾಂತದ ಮೇರೆಗಂತೂ, ಪಟ್ಟವೇರುವ ಮೊದಲು ಅಶೋಕನು ಅತಿ ದುಷ್ಟನೂ ಕ್ರೂರನೂ ಇದ್ದನೆಂದೂ ಮತ್ತು ರಕ್ತಪಾತದಿಂದ ಪಟ್ಟಗಳಿಸಿದನೆಂದೂ ತಿಳಿಯಲಾಗುತ್ತದೆ.

೨. ಕ್ರಿ. ಪೂ. ೨೬೧ ರಲ್ಲಿ.

೩. ಮಹಾನದೀ ಮತ್ತು ಗೋದಾವರೀ ಮುಖಗಳ ಪ್ರದೇಶ.

೪. ಕ್ರಿ. ಪೂ. ೨೬೦ ರಲ್ಲಿ ಭಿಕ್ಷುವಾಗಿ ಬೌದ್ಧಸಂಘವನ್ನು ಸೇರಿದನು.

ಕೊನೆಯ ವರುಷಗಳಲ್ಲಿ ಅವನ ರಾಣಿಯರಲ್ಲಿ ಪರಸ್ಪರ ಕಲಹಗಳಾಗಹತ್ತಿದವು. ಅವರ ನಡತೆಯು ಅಶೋಕನಿಗೆ ಅಸಹ್ಯವೆನಿಸಿತು. ಇವೇ ಮೊದಲಾದ ಕಾರಣಗಳಿಂದ ಅವನಿಗೆ ಮುಪ್ಪಿನಲ್ಲಿ ಸುಖ–ಶಾಂತಿಗಳು ಉಳಿಯಲಿಲ್ಲ. ಅಶೋಕನು ಕ್ರಿ. ಪೂ. ೨೩೨ರಲ್ಲಿ ಮರಣಹೊಂದಿದನು.

**ಅಶೋಕನ ಸ್ವಕೀಯ ಜೀವನದ ಮೇಲೆ ಬೌದ್ಧ ತತ್ತ್ವಗಳ ಪರಿಣಾಮಗಳು :—**

ಅ) ಬೌದ್ಧಧರ್ಮವನ್ನು ಸ್ವೀಕರಿಸಿದ ಕೂಡಲೆ ಅಶೋಕನು ಬೇಟೆಯಾಡುವದನ್ನು ಮತ್ತು ಮಾಂಸಭಕ್ಷಣವನ್ನು ಬಿಟ್ಟುಕೊಟ್ಟನು. ಅರಮನೆಯ ಪಾಕಶಾಲೆಗೆ ಅಡಿಗೆಗಾಗಿ ಒದಗಿಸುತ್ತಿದ್ದ ಮಾಂಸದ ಪೂರೈಕೆಯನ್ನು ನಿಲ್ಲಿಸಿದನು.

ಆ) ಕೆಲವು ವರುಷಗಳ ಅನಂತರ, ಅಶೋಕನು ಉಪಗುಪ್ತನೊಂದಿಗೆ ಬೌದ್ಧರ ಪವಿತ್ರ ಕ್ಷೇತ್ರಗಳಾಗಿದ್ದ ಬುದ್ಧಗಯಾ, ಸಾರನಾಥ, ಕಪಿಲವಸ್ತು, ಕುಶಿನಗರ, ರಾಜಗೃಹ, ವೈಶಾಲಿ, ವಾರಣಾಸಿ ಮೊದಲಾದ ಸ್ಥಳಗಳಿಗೆ ತೀರ್ಥಯಾತ್ರೆಗಾಗಿ ಹೋಗಿಬಂದನು.[೧] ( ಇದರಿಂದ ಬೌದ್ಧ ಧರ್ಮದಲ್ಲಿ ಅವನ ಭಕ್ತಿ-ವಿಶ್ವಾಸಗಳು ಮತ್ತೂ ದೃಢವಾದವು. )

ಇದರ ಪರಿಣಾಮವಾಗಿ, ಅಶೋಕನು ತನ್ನ ಉಳಿದ ಆಯುಷ್ಯವನ್ನೆಲ್ಲ ಪರೋಪಕಾರ, ಧರ್ಮಾಚರಣೆ, ಶಾಂತಿಪ್ರಚಾರ ಮತ್ತು ಧರ್ಮಪ್ರಸಾರಗಳಲ್ಲಿ ಕಳೆಯುವ ನಿರ್ಧಾರ ಮಾಡಿದನು. ಕಲಿಂಗಯುದ್ಧದಿಂದ ಅವನಲ್ಲುಂಟಾದ ವಿರಕ್ತಿ, ಉಪಗುಪ್ತನಿಂದ ಅವನಿಗಾದ ಬೌದ್ಧಧರ್ಮೋಪದೇಶ, ಬೌದ್ಧಧರ್ಮಕ್ಷೇತ್ರಗಳಿಗೆ ಅವನು ಕೈಕೊಂಡ ತೀರ್ಥಯಾತ್ರೆಗಳು ಇವೇ ಅವನ ಹೊಸರೀತಿಯ ಜೀವನಕ್ಕೆ ಕಾರಣಗಳಾದವು ಎನ್ನಬಹುದು.

**ಅಶೋಕನ ಸಾರ್ವಜನಿಕ ಜೀವನದ ಮೇಲೆ ಬೌದ್ಧ ತತ್ತ್ವಗಳ ಪರಿಣಾಮಗಳು:—**

**ಅಶೋಕನ ಶಾಂತಿಪ್ರಸಾರಗಳು :—**

ಅ) ಎಲ್ಲಕ್ಕೂ ಮೊದಲಿಗೆ, ಭೂತದಯೆಯಿಂದ ಪ್ರೇರಿತನಾಗಿ ಅಶೋಕನು ಕಳಿಂಗ ಯುದ್ಧದ ಪುನರಾವೃತ್ತಿಯನ್ನು ತಾನು ಮುಂದೆಂದೂ ಮಾಡಗೊಡೆನೆಂದು ದಕ್ಷಿಣದಲ್ಲಿಯ ಗಡಿನಾಡಿನ ರಾಜರಿಗೆ ಆಶ್ವಾಸನವನ್ನು ಕೊಟ್ಟನು.

---

೧. ಕ್ರಿ. ಪೂ. ೨೫೦–೨೪೯ ರಲ್ಲಿ.

ಆ) ತಾನು ಬೇಟೆ ಮತ್ತು ಮಾಂಸಸೇವನೆಯನ್ನು ಬಿಟ್ಟನಲ್ಲದೆ, ತನ್ನ ರಾಜ್ಯದಲ್ಲಿ ಕೇವಲ ವಿನೋದಕ್ಕಾಗಿ ಪಶುಪಕ್ಷಿಗಳನ್ನು ಕೊಲ್ಲುವ ಮತ್ತು ಯಜ್ಞಗಳಲ್ಲಿ ಪಶುವಧೆ ಮಾಡುವ ರೂಢಿಯನ್ನು ನಿಲ್ಲಿಸಿದನು.

ಇ) ಪಶುಗಳ ಇಲ್ಲವೆ ಪಕ್ಷಿಗಳ ಕಾದಾಟವನ್ನೊಳಗೊಂಡ ವಿನೋದೋತ್ಸವಗಳನ್ನು ನಿಲ್ಲಿಸಿದನು. ಏಕೆಂದರೆ, ಅವುಗಳಲ್ಲಿ ರಕ್ತಪಾತ ಮತ್ತು ಸಾವುನೋವುಗಳಾಗುವ ಸಂಭವಗಳಿದ್ದವು.

ಈ) ಮನುಷ್ಯರಂತೆ, ಮೃಗಪ್ರಾಣಿಗಳ ಸಲುವಾಗಿಯೂ ತನ್ನ ರಾಜ್ಯದಲ್ಲಿ ಚಿಕಿತ್ಸಾಲಯಗಳನ್ನು ಕಟ್ಟಿಸಿದನು.

ಉ) ಔಷಧಗಳ ಪೂರೈಕೆಗಾಗಿ, ವನಸ್ಪತಿಗಳನ್ನು ಬೆಳಸುವ ಯೋಜನೆಗಳನ್ನು ಮಾಡಿದನು.

ಲೋಕಕಲ್ಯಾಣಬುದ್ಧಿಯಿಂದ ಪ್ರೇರಿತನಾಗಿ, ಪ್ರಯಾಣಿಕರಿಗೆ ಹೆಚ್ಚಿನ ಮಾರ್ಗಸೌಕರ್ಯಗಳನ್ನು ಉಂಟುಮಾಡಿದನು. ಚಂದ್ರಗುಪ್ತನ ಆಳಿಕೆಯಲ್ಲಿ ತಯಾರಿಸಲ್ಪಟ್ಟ ರಸ್ತೆಗಳಲ್ಲಿ ಮಾರ್ಗದರ್ಶಕ ಕಂಬಗಳನ್ನೂ, ಹೆದ್ದಾರಿಗಳ ಇಬ್ಬದಿಗೂ ನೆರಳಿಗಾಗಿ ಆಲದ ಗಿಡಗಳನ್ನೂ ಹಣ್ಣಿಗಾಗಿ ಮಾವಿನಗಿಡಗಳನ್ನೂ ನೆಡಸಿದನು. ನಡುನಡುವೆ, ನೀರಿಗಾಗಿ ಬಾವಿಗಳನ್ನೂ ವಿಶ್ರಾಂತಿಗಾಗಿ ವಿಶ್ರಾಂತಿಗೃಹಗಳನ್ನೂ ಕಟ್ಟಿಸಿದನು. ಒಕ್ಕಲಿಗರಿಗಾಗಿ, -ನೀರಾವರಿ–ಬಾಂವಿ, ಕೆರೆ, ಕಾಲುವೆಗಳ-ಯೋಜನೆಗಳನ್ನು[೧] ಅಮಲಿನಲ್ಲಿ ತಂದನು. ತನ್ನ ಅಪ್ಪಣೆ ಇಲ್ಲದೆ ಯಾವ ನಿರಪರಾಧಿಗೂ ಕಷ್ಟ ಕೊಡಕೂಡದೆಂದು ಅಧಿಕಾರಿಗಳಿಗೆ ಆಜ್ಞೆ ವಿಧಿಸಿದನು. ತನ್ನ ಕೈಕೆಳಗಿನ ಅಧಿಕಾರಿಗಳಿಂದ ಪ್ರಜಾಪೀಡನೆಯಾಗಬಾರದೆಂದು ಅಶೋಕನು ಅವರ ಮೇಲೆ ತೀಕ್ಷ್ಣದೃಷ್ಟಿ ಇಟ್ಟನು. ಕಾಡುಜನರಿಗಾಗಿ ಮತ್ತು ತುರಂಗವಾಸಿಗಳಿಗಾಗಿ ನೈತಿಕ ಸುಧಾರಣೆಯ

---

೧. ಆಗಿನ ಕಾಲದ ಪ್ರಸಿದ್ಧ ನೀರಾವರಿ ಯೋಜನೆಯೆಂದರೆ— ಕಾಠೆವಾಡದ ಗಿರಿನಾರ ಪರ್ವತದ ಬಳಿಯಲ್ಲಿಯ ಸುದರ್ಶನ ಎಂಬ ಕೆರೆ. ಇದನ್ನು ಚಂದ್ರಗುಪ್ತನ ಆಳಿಕೆಯಲ್ಲಿ ಪುಷ್ಯಗುಪ್ತನೆಂಬ ವೈಶ್ಯನು ಕಟ್ಟಿದನು. ಅಶೋಕನ ಆಳಿಕೆಯಲ್ಲಿ ‘ತುಷಾಸ್ಪ’ ನೆಂಬ ಗ್ರೀಕ ಸರದಾರನು ಆ ಪ್ರಾಂತದ ಅಧಿಕಾರಿಯಾಗಿದ್ದನು. ಅವನು ಈ ಕೆರೆಗೆ ಕಾಲುವೆಗಳನ್ನು ಕಟ್ಟಿಸಿ ನಿರ್ಜಲ ಪ್ರದೇಶಗಳಿಗೆ ನೀರು ದೊರಕಿಯುವಂತೆ ಮಾಡಿದನು.

ಏರ್ಪಾಡು ಮಾಡಿದನು. ತನ್ನ ಜನ್ಮೋತ್ಸವ ದಿನಗಳಲ್ಲಿ ಕೈದಿಗಳ ಬಂಧ ವಿಮೋಚನೆಯಾಗುವಂತೆ ನೋಡಿಕೊಂಡನು.

( ಅನಿವಾರ್ಯ ಪ್ರಸಂಗಗಳಲ್ಲಿ ಮಾತ್ರ ಮರಣದಂಡನೆಯನ್ನು ವಿಧಿಸಲಾಗುತ್ತಿತ್ತು. )

**ಅಶೋಕನ ಧರ್ಮದಿಗ್ವಿಜಯ** (ಧರ್ಮಪ್ರಸಾರ):—

ಬೌದ್ಧಧರ್ಮವು ಪ್ರಸಾರವಾಗಿ ನೆಲಸುವಂತೆ ಮಾಡುವದಕ್ಕಾಗಿ ಅಶೋಕನು ಐದು ಉಪಾಯಗಳನ್ನು ಕೈಕೊಂಡನು. ಅವು ಯಾವವೆಂದರೆ :—

೧. **ರಾಜಾಜ್ಞೆಗಳ ಪ್ರಕಟನೆ** ( ಶಿಲಾಶಾಸನಗಳು ).

ಧರ್ಮತತ್ತ್ವಗಳೂ ನೀತಿಕಟ್ಟಳೆಗಳೂ ಜನರಿಗೆ ತಿಳಿಯಬೇಕೆಂದು ಅಶೋಕನು ರಾಜಾಜ್ಞೆಗಳನ್ನು ( ಶಾಸನಗಳನ್ನು ) ಪ್ರಕಟಿಸಿದನು. ಇವು ಸಾಮ್ರಾಜ್ಯದ ಬೇರೆ ಬೇರೆ ಭಾಗಗಳಲ್ಲಿ ಕಲ್ಲುಬಂಡೆಗಳಮೇಲೂ ಕಲ್ಲು ಕಂಬಗಳಮೇಲೂ ಮತ್ತು ಗವಿಗಳ ಮುಖಗಳಲ್ಲಿಯೂ ಕೆತ್ತಲ್ಪಟ್ಟವು. ಇದೇ ಅವನ ಶಿಲಾಶಾಸನಗಳು. ಇವುಗಳನ್ನು ಅನುಕ್ರಮವಾಗಿ ಗಿರಿಲೇಖ, ಸ್ತಂಭ ಲೇಖ ಮತ್ತು ಗುಹಾಲೇಖಗಳೆಂದೂ ಕರೆಯಲಾಗುತ್ತದೆ. ಇಂದಿಗೆ ಸುಮಾರು ೨೨೫೦ ವರುಷಗಳು ಕಳೆದುಹೋಗಿದ್ದರೂ ಅನೇಕ ಶಿಲಾಶಾಸನಗಳು ಈಗಲೂ ಅಲ್ಲಲ್ಲಿ ಕಂಡುಬರುತ್ತಿವೆ[೧] ( ಚಿತ್ರ ೩ ನೋಡಿರಿ ). ಇವುಗಳಲ್ಲಿ ಆ ಕಾಲದ ಶಿಲ್ಪಕಲೆಯ ಕುಶಲತೆಯು ಕಂಡುಬರುತ್ತದೆ. [ ಸಾರನಾಥದಲ್ಲಿಯ ಸ್ತಂಭವು ಈಗಲೂ ಪ್ರಸಿದ್ಧವಿದೆ. ಅದರ ಅಗ್ರ ( ತುದಿಯ ) ಭಾಗದಲ್ಲಿ ಚಕ್ರ ಮತ್ತು ಸಿಂಹಗಳ ಚಿತ್ರಗಳಿರುವವು (ಚಿತ್ರ ೪ ನೋಡಿರಿ). ಪ್ರತಿಯೊಂದು ಸ್ತಂಭದ ಎತ್ತರವು ೪೦-೫೦ ಘೂಟು ಇರುತ್ತದೆ. ] ಇವುಗಳಲ್ಲಿ ಸಾಮಾನ್ಯ ಜನರಿಗೆ ಅಪ್ಪಣೆಗಳೂ, ಅಧಿಕಾರಿಗಳಿಗೆ ಕರ್ತವ್ಯಸೂಚನೆಗಳೂ ಇವೆ. ಅಶೋಕನ ಉಪದೇಶಗಳಲ್ಲಿ ಬೌದ್ಧಧರ್ಮವು ಅವನ ಮೇಲೆ ತನ್ನ ಸಂಪೂರ್ಣ ಪ್ರಭಾವ ಬೀರಿದುದು ಕಂಡುಬರುತ್ತದೆ.[೨] ಈ ಶಿಲಾಶಾಸನಗಳಲ್ಲಿ

---

೧. ಇಲ್ಲಿಯವರೆಗೆ ದೊರೆತ ಶಿಲಾಲೇಖಗಳ ಒಟ್ಟು ಸಂಖ್ಯೆ, ೩೪. ಅವುಗಳಲ್ಲಿ ಗಿರಿಲೇಖಗಳು, ೧೪; ಸ್ತಂಭಲೇಖಗಳು, ೮.

೨. ಉದಾಹರಣೆಗಾಗಿ:— ಪ್ರಾಣಿವಧೆ ಮಾಡಕೂಡದು; ಆನಂದೋತ್ಸವಗಳನ್ನು ಸಾತ್ತ್ವಿಕ ರೀತಿಯಿಂದ ನಡೆಸಬೇಕು; ಐದು ವರುಷಗಳಿಗೊಮ್ಮೆ ಬೌದ್ಧ ಧರ್ಮೋತ್ಸವಗಳನ್ನು ಆಚರಿಸಬೇಕು ಮುಂತಾದವು ಕಂಡುಬರುವವು.

ಅಶೋಕನ ಮನಸ್ಸಿನ ಕೋಮಲತೆ, ನಿಸ್ಪೃಹತೆ, ದೈನ್ಯ, ಧರ್ಮಸಹಿಷ್ಣುತೆ, ವಿವಿಧ ಮತಸ್ಥರು ಒಟ್ಟುಗೂಡಬೇಕೆಂಬ ಅವನ ಹಂಬಲ, ಮನವೊಲಿಸಿ ಧರ್ಮಪ್ರಸಾರ ಮಾಡಬೇಕಲ್ಲದೆ ಬಲಾತ್ಕಾರದಿಂದಲ್ಲವೆಂಬ ಅವನ ಆಜ್ಞೆ ಮುಂತಾದವು ತಿಳಿದುಬರುತ್ತವೆ. ಇವುಗಳಲ್ಲಿ ದರ್ಪವಾಗಲಿ, ಅಟ್ಟಹಾಸ ವಾಗಲಿ ಎಲ್ಲಿಯೂ ಕಾಣುವದಿಲ್ಲ. ಸಾಮಾನ್ಯವಾಗಿ ಪ್ರತಿಯೊಂದು ಶಿಲಾ ಶಾಸನದ ಪ್ರಾರಂಭದ ವಾಕ್ಯವು ಹೀಗಿರುವದು:—"ದೇವರಿಗೆ ಪ್ರಿಯನಾದ ಹಾಗು ನಿಮ್ಮ ಹಿತಚಿಂತಕನಾದ ಅರಸನು ಹೇಳುವದೇನಂದರೆ,..........." ಇದರಿಂದ ಅಶೋಕನ ವಿನಯ, ಸೌಜನ್ಯಗಳು ಒಡೆದುಕಾಣುವವು. ಸಾಮಾನ್ಯಜನರಿಗೆ ತಿಳಿಯಬೇಕೆಂದು ಶಿಲಾಶಾಸನಗಳ ಭಾಷೆಯಾದರೂ ಸುಲಭವಿರುವದು. ಎಷ್ಟೋ ಸ್ತೂಪಗಳ[೧] ಮೇಲೂ ಅಶೋಕನು ತನ್ನ ಶಾಸನಗಳನ್ನು ಕೆತ್ತಿಸಿದನು. ಸಾಂಚಿಯಲ್ಲಿಯ ಸ್ತೂಪವು ಇಂದಿಗೂ ಪ್ರಸಿದ್ಧವಿದೆ. ಅದರ ಎತ್ತರ, ೫೪ ಫೂಟು ( ಚಿತ್ರ ೫ ನೋಡಿರಿ ).

## ೨. ಧರ್ಮಾಧಿಕಾರಿಗಳು.

ಜನರಲ್ಲಿ ಧರ್ಮವು ಶುದ್ಧವಾಗಿ ಉಳಿಯಬೇಕೆಂದು ಮತ್ತು ನೀತಿ ಮತ್ತೆಯು ಬೆಳೆಯಬೇಕೆಂದು ಅಶೋಕನು ಧರ್ಮಾಧಿಕಾರಿಗಳನ್ನು ನೇಮಿಸಿ ದನು. '**ರಜ್ಜುಕ**' ರೆಂಬ ಅಧಿಕಾರಿಗಳಿಗೆ ಹಳ್ಳಿ-ನಾಡುಗಳ ಜನರ ನೈತಿಕ ಸುಧಾರಣೆಯ ಹೊಣೆಯನ್ನು ಒಪ್ಪಿಸಿಕೊಡಲಾಯಿತು. 'ಧರ್ಮ ಮಹಾಮಾತ್ರ' ರೆಂಬವರು ಮೇಲ್ತರಗತಿಯ ಧರ್ಮಾಧಿಕಾರಿಗಳು. ರಾಜಧಾನಿ, ನೆರೆ ಹೊರೆಯ ಪಟ್ಟಣಗಳು, ಸಾಮ್ರಾಜ್ಯದ ವಾಯುವ್ಯ ಮತ್ತು ಪಶ್ಚಿಮ ಸರಹದ್ದು ಗಳ ಕುಲಪ್ರದೇಶಗಳು ಇವು ಇವರ ಕಾರ್ಯಕ್ಷೇತ್ರಗಳಾಗಿದ್ದವು. 'ಸಂಘ ಮೇಲ್ವಿಚಾರಕರು' ಬೌದ್ಧ ಧರ್ಮ ಸಂಘಗಳ ಶುದ್ಧಿಗಾಗಿ ಪ್ರಯತ್ನಿಸಿದರು.

## ೩. ಧರ್ಮಯಾತ್ರೆಗಳು.

ಧರ್ಮವಿಜಯವೆ ನಿಜವಾದ ವಿಜಯವೆಂದು ಅಶೋಕನ ಅಭಿಪ್ರಾಯ. ತನ್ನ ರಾಜ್ಯದಲ್ಲಿ ರಣಭೇರಿಯ ಪ್ರತಿಯಾಗಿ ಧರ್ಮಭೇರಿಯೆ ಎಲ್ಲೆಲ್ಲಿಯೂ ಕೇಳಿ

---

೧. ಸ್ತೂಪಗಳೆಂದರೆ ಬುದ್ಧನ ಅವಶೇಷಗಳನ್ನು ಕಾದಿಡುವದಕ್ಕಾಗಿ ಕಟ್ಟಿದ ಭವ್ಯ ವಾದ ಮಣ್ಣಿನ ದಿಬ್ಬಗಳು. ಇವು ಅರ್ಧಗೋಲಾಕಾರದ ಆಕೃತಿಯುಳ್ಳವು.

ಬರಬೇಕೆಂದು ಅವನ ನಿರ್ಧಾರ. ಅರಸನು ವಿಹಾರಯಾತ್ರೆ ( ಮೋಜಿಗಾಗಿ ಸಂಚಾರ ) ಗಳ ಪ್ರತಿಯಾಗಿ ಧರ್ಮಯಾತ್ರೆಗಳನ್ನು ಮಾಡಬೇಕೆಂದು ಅವನ ಅಭಿಮತ. ಇದಕ್ಕಾಗಿ, ತನ್ನ ರಾಜ್ಯದಲ್ಲಿ ಅಶೋಕನು ಹತ್ತು ವರುಷಗಳಿಗೊಮ್ಮೆ ಧರ್ಮಯಾತ್ರೆಗಾಗಿ ಹೊರಡುತ್ತಿದ್ದನು. ಆಗ ಜನರಿಗೆ ಧರ್ಮ ಮತ್ತು ನೀತಿಬೋಧೆಗಳನ್ನು ಮಾಡುತ್ತಿದ್ದನು. ತನ್ನ ಕೈಕೆಳಗಿನ ಅಧಿಕಾರಿಗಳು ಐದು ವರುಷಗಳಿಗೊಮ್ಮೆ ಹೀಗೆ ಮಾಡಬೇಕೆಂದು ಅವರಿಗೆ ಆಜ್ಞೆಯಿತ್ತನು.

### ೪. ಬೌದ್ಧಮಹಾಸಭೆ.[೧]

ಕ್ರಿ. ಪೂ. ೨೪೦ರಲ್ಲಿ ಅಶೋಕನು ರಾಜಧಾನಿಯಾದ ಪಾಟಲೀಪುತ್ರದಲ್ಲಿ ಬೌದ್ಧ ಭಿಕ್ಷುಗಳ ಮಹಾಸಭೆಯನ್ನು ನೆರೆಯಿಸಿದನು. ಇದು ೯ ತಿಂಗಳವರೆಗೆ ಸಾಗಿತಂತೆ. ಬೌದ್ಧಧರ್ಮದ ಮುಖ್ಯ ತತ್ತ್ವಗಳನ್ನು ಒಟ್ಟುಗೂಡಿಸುವದು ಮತ್ತು ಬೌದ್ಧಧರ್ಮಪ್ರಸಾರಕ್ಕಾಗಿ ವಿಶೇಷ ಮಾರ್ಗವನ್ನು ಗೊತ್ತುಪಡಿಸುವದು, ಇವು ಈ ಸಭೆಯ ಮುಖ್ಯ ಉದ್ದೇಶಗಳಾಗಿದ್ದವು. ಇವಲ್ಲದೆ ಈ ಸಭೆಯಲ್ಲಿ ರಾಜಾಜ್ಞೆಯಿಂದ ತಿದ್ದಿ ಸರಿಪಡಿಸಿದ ಬೌದ್ಧ ಧರ್ಮಗ್ರಂಥವು ರಚಿತವಾಯಿತು.

### ೫. ಧರ್ಮೋಪದೇಶಕರು (ಧರ್ಮದೂತರು).

ಅಶೋಕನ ಅಪ್ಪಣೆಯಿಂದ ಸಾಮ್ರಾಜ್ಯದ ಒಳಗೂ ಹೊರಗೂ ಬೌದ್ಧಧರ್ಮವನ್ನು ಪ್ರಸಾರ ಮಾಡುವದರ ಸಲುವಾಗಿ ೬೪,೦೦೦ ಭಿಕ್ಷುಗಳನ್ನು ತರಬೇತುಗೊಳಿಸಲಾಯಿತು. ಅವರಿಗಾಗಿ ಅಶೋಕನು ಸಾವಿರಾರು ವಿಹಾರ ( ಮಠ ) ಗಳನ್ನು ಕಟ್ಟಿಸಿಕೊಟ್ಟು ಉದಾರ ವೃತ್ತಿ ( ದಾನ–ಧರ್ಮ) ಗಳನ್ನು ಕೊಟ್ಟಂತೆ ಕಂಡುಬರುತ್ತದೆ. ಪಾಟಲೀಪುತ್ರದ ಸಮೀಪದಲ್ಲಿ ಅಶೋಕಾರಾಮ ಮತ್ತು ಕುಕ್ಕುಟಾರಾಮಗಳೆಂಬ ಭವ್ಯವಾದ ವಿಹಾರಗಳಿದ್ದವು.

೧. ಇದು ೩ನೆಯ ಮಹಾಸಭೆ. ಮೊದಲನೆಯದು ಕ್ರಿ. ಪೂ. ೪೭೭ ರಲ್ಲಿ ರಾಜಗೃಹದಲ್ಲಿ ನೆರೆಯಿತು. ಅದರಲ್ಲಿ ಭಿಕ್ಷುಗಳು ಬುದ್ಧನ ಉಪದೇಶಗಳನ್ನು ಒಟ್ಟುಗೂಡಿಸಿ ಬರೆದಿಟ್ಟರು. ೨ನೆಯದು ಕ್ರಿ. ಪೂ. ೩೭೦ ರಲ್ಲಿ ವೈಶಾಲಿಯಲ್ಲಿ ನೆರೆಯಿತು. ಬೌದ್ಧಧರ್ಮದಲ್ಲುಂಟಾಗಿದ್ದ ವ್ಯತ್ಯಾಸಗಳನ್ನು ಅದರಲ್ಲಿ ಸರಿಪಡಿಸಲಾಯಿತು.

**ಸಾಮ್ರಾಜ್ಯದ ಒಳಗೆ, ಧರ್ಮಪ್ರಸಾರಕ್ಕಾಗಿ ಭಿಕ್ಷುಗಳು ಹೋದ ದೇಶಗಳು :—**

ವಾಯುವ್ಯದಲ್ಲಿ ಗಾಂಧಾರ, ಕಾಶ್ಮೀರ, ಕಾಂಬೋಜ; ಗುಜರಾಥ; ಮಹಾರಾಷ್ಟ್ರ, ಬನವಾಸಿ ಮತ್ತು ಮೈಸೂರು.[೧]

**ಸಾಮ್ರಾಜ್ಯದ ಹೊರಗೆ, ಧರ್ಮಪ್ರಸಾರಕ್ಕಾಗಿ ಭಿಕ್ಷುಗಳು ಹೋದ ದೇಶಗಳು :—**

ದಕ್ಷಿಣ ಭಾರತದ ಚೋಳ, ಚೇರ, ಪಾಂಡ್ಯ ಮುಂತಾದವು; ಸಿಂಹಳ; ಉತ್ತರದ ನೇಪಾಳ,[೨] ಟಿಬೇಟ ದೇಶಗಳು, ಬ್ರಹ್ಮದೇಶ; ಆಗ್ನೇಯದ ಹಿಂದು–ಚೀನ. ಸಿಂಹಳಕ್ಕೆ ಅಶೋಕನು ತನ್ನ ಮಕ್ಕಳಾದ ಮಹೇಂದ್ರ ಮತ್ತು ಸಂಘಮಿತ್ರೆಯರನ್ನು ಕಳುಹಿದನು[೩] ( ಚಿತ್ರ ೬ ನೋಡಿರಿ ). ಕೊನೆಯದಾಗಿ, ಅಶೋಕನು ಸಿರಿಯಾ, ಮೆಸಿಡೋನಿಯಾ, ಇಜಿಪ್ತ ಮುಂತಾದ ಐದು ಗ್ರೀಕ ರಾಜ್ಯಗಳ ರಾಜರೊಂದಿಗೆ ಸ್ನೇಹಸಂಬಂಧ ಬೆಳಿಸಿ, ಆ ದೂರ ದೇಶಗಳಲ್ಲಿ ಕೂಡ ಬುದ್ಧನ ಸಂದೇಶಗಳು ಹಬ್ಬುವಂತೆ ಮಾಡಿದನು.

ಈ ರೀತಿಯಾಗಿ ಚಿಕ್ಕದಾಗಿದ್ದ ಬೌದ್ಧಧರ್ಮವನ್ನು ಅಶೋಕನು ಜಗತ್ತಿನ ಒಂದು ಮುಖ್ಯ ಧರ್ಮವನ್ನಾಗಿ ಮಾಡಿದನು ( ಚಿತ್ರ ೭ ನೋಡಿರಿ ). ಇದಕ್ಕಾಗಿಯೇ ಅಶೋಕನಿಂದಾದ ಧರ್ಮಪ್ರಸಾರವನ್ನು ಅವನ ಧರ್ಮದಿಗ್ವಿಜಯ ಎಂದು ಕರೆಯಲಾಗುತ್ತದೆ.

---

೧. ಗಾಂಧಾರ, ಕಾಶ್ಮೀರ, ಕಾಂಬೋಜಗಳಿಗೆ, 'ಮಧ್ಯಂತಿಕ' ನೆಂಬ ಭಿಕ್ಷುವು ಹೋದನು. ಗುಜರಾಥಕ್ಕೆ, 'ಧರ್ಮರಕ್ಷಿತ' ನೆಂಬ ಭಿಕ್ಷು; ಮಹಾರಾಷ್ಟ್ರಕ್ಕೆ , 'ಮಹಾಧರ್ಮರಕ್ಷಿತ' ನೆಂಬ ಭಿಕ್ಷು; ಬನವಾಸಿಗೆ, 'ರಕ್ಷಿತ'ನೆಂಬ ಭಿಕ್ಷು; ಮೈಸೂರಿಗೆ, 'ಮಹಾದೇವ' ನೆಂಬ ಭಿಕ್ಷು.

೨. ನೇಪಾಳಕ್ಕೆ ಅಶೋಕನ ಮಗಳಾದ ಚಾರುಮತಿ ಮತ್ತು ಅವಳ ಗಂಡನಾದ ದೇವಪಾಲ ಇವರು ಹೋಗಿ ಅಲ್ಲಿಯೇ ನೆಲಸಿದರು.

೩. ಇವರು ಭಿಕ್ಷು, ಭಿಕ್ಷುಣಿಯರಾಗಿದ್ದರು. " ತಿಷ್ಯ "ನೆಂಬ ಸಿಂಹಳದ ಅರಸನೂ ಅವನ ಸಂಗಡಿಗರೂ ಇವರಿಂದ ಬೌದ್ಧಮತವನ್ನು ಸ್ವೀಕರಿಸಿದರು. ಅಶೋಕನಿಂದ ಬೋಧಿವೃಕ್ಷದ ಟೊಂಗೆಯೊಂದನ್ನು ಅಲ್ಲಿಗೆ ತರಿಸಿ ಅನುರಾಧಪುರವೆಂಬಲ್ಲಿ ಅದನ್ನು ನೆಡಲಾಯಿತು.

**ಅಶೋಕನ ಶ್ರೇಷ್ಠತೆ :—**

ಅಶೋಕನು ಭಾರತದಲ್ಲಿ ಆಗಿಹೋದ ಅರಸರಲ್ಲಿ ಅತಿ ಶ್ರೇಷ್ಠನೆಂದು ಈಗಲೂ ಖ್ಯಾತಿಗೊಂಡಿದ್ದಾನೆ. ಅವನು ಭೂತದಯೆ, ಪರೋಪಕಾರಬುದ್ಧಿ, ಧರ್ಮಪ್ರಸಾರದ ಹಿರಿಯಾಶೆ ಇವುಗಳಿಂದ ಸ್ಫೂರ್ತಿಗೊಂಡವನಾಗಿ ಅತ್ಯಂತ ಮಹತ್ತ್ವದ ಕಾರ್ಯಗಳನ್ನು ನೆರವೇರಿಸಿದ ಮಹಾವ್ಯಕ್ತಿ. ಇದಕ್ಕಾಗಿ ಪ್ರಿಯದರ್ಶಿ, ರಾಜರ್ಷಿ ಮತ್ತು ಮಹಾತ್ಮನೆಂಬ ಹೆಸರುಗಳಿಂದ ಅವನನ್ನು ಕರೆಯಲಾಯಿತು.

ಕ್ರಿ. ಶ. ೧೯೪೭ರಲ್ಲಿ ಸ್ವತಂತ್ರ ಭಾರತವು ತನ್ನ ರಾಷ್ಟ್ರಧ್ವಜವನ್ನು ಅಶೋಕಚಕ್ರಾಂಕಿತವನ್ನಾಗಿ ಮಾಡಿದುದೂ ನಾಣ್ಯ ಮತ್ತು ಅಂಚಿತಿಕೀಟುಗಳ ಮುಖಮುದ್ರೆಗಾಗಿ ಸಾರನಾಥದಲ್ಲಿಯ ಅಶೋಕಸ್ತಂಭಾಗ್ರದ ಸಿಂಹಗಳ ಚಿತ್ರವನ್ನು ಬಳಸುತ್ತಿರುವದೂ ಅಶೋಕನ ಬಗೆಗೆ ಭಾರತೀಯರು ಈಗಲೂ ತೋರುತ್ತಿರುವ ಅತ್ಯಂತ ಗೌರವದ ದ್ಯೋತಕಗಳಲ್ಲವೇ ?

## ಅಭ್ಯಸನಗಳು

೧. ಕೆಳಗೆ ಕೊಟ್ಟ ವಾಕ್ಯಗಳಲ್ಲಿ ತೆರವಿರುವ ಸ್ಥಳಗಳನ್ನು ಯೋಗ್ಯ ಶಬ್ದಗಳಿಂದ ತುಂಬಿರಿ.

ಅ. ................ನು ಅಶೋಕನಿಗೆ ಬೌದ್ಧಧರ್ಮವನ್ನು ಉಪದೇಶಿಸಿದನು.

ಆ. ಅಶೋಕನ ಶಿಲಾಲೇಖಗಳು ಮೂರು ತರಹದವು :—

೧................೨................೩................

ಇ. ೧................೨................ರೆಂಬವರು ಅಶೋಕನಿಂದ ನೇಮಿಸಲ್ಪಟ್ಟ ಧರ್ಮಾಧಿಕಾರಿಗಳು.

೨. ಕೆಳಗೆ, ಅಶೋಕನ ಜೀವನದಲ್ಲಿಯ ಕೆಲವು ಸಂಗತಿಗಳನ್ನು ಮತ್ತು ಅವು ಸಂಭವಿಸಿದ ವರುಷಗಳನ್ನು ಕೊಡಲಾಗಿದೆ. ಪ್ರತಿಯೊಂದು ಸಂಗತಿಯ ಮುಂದೆ ಆದರ ಯೋಗ್ಯ ವರುಷವನ್ನು ಬರೆಯಿರಿ:—

| ಸಂಗತಿಗಳು | ವರುಷಗಳು |
|---|---|
| ಅಶೋಕನ ರಾಜ್ಯಾಭಿಷೇಕ........ | ಕ್ರಿ. ಪೂ. ೨೪೦ |

| | | |
|---|---|---|
| ಕಳಿಂಗ ಯುದ್ಧ | ............ | ಕ್ರಿ. ಪೂ. ೨೬೧ |
| ಮೂರನೆಯ ಬೌದ್ಧ ಮಹಾಸಭೆ | | ,, ೨೫೨ |
| ಅಶೋಕನ ಮರಣ | | ,, ೨೩೬ |

೩. ಕೆಳಗೆ ಕೊಟ್ಟ ರೇಖಾಚಿತ್ರವು ಅಶೋಕನ ಜೀವನದಲ್ಲಿಯ ಯಾವ ಸಂಗತಿಯನ್ನು ಚಿತ್ರಿಸುತ್ತದೆ? ಇದರಲ್ಲಿ ಮನುಷ್ಯಾಕೃತಿಯ ಚಿತ್ರಗಳಲ್ಲಿ ಯಾರು ಯಾರೆಂಬದನ್ನು ಹೇಳಿರಿ.



ಮಗಧ ಸಿಂಹಾಸನ

೪. "ಅಶೋಕನ ಮತಾಂತರ" ಈ ವಿಷಯವನ್ನು ನಾಟ್ಯೀಕರಣಕ್ಕಾಗಿ ಶಕ್ಯವಿದ್ದ ಮಟ್ಟಿಗೆ ಉಪಯೋಗಿಸಿಕೊಳ್ಳಬಹುದು.




ಚಿತ್ರ ೨. ಕನಿಷ್ಕನ ಸಾಮ್ರಾಜ್ಯ

# ೯ನೆಯ ಪ್ರಕರಣ

## ಕನಿಷ್ಕ ( ಕ್ರಿ. ಶ. ೧೨೦ರಿಂದ ಕ್ರಿ. ಶ. ೧೬೨ ರವರೆಗೆ )

ಅಶೋಕನ ಅನಂತರ ಭಾರತದಲ್ಲಿ ಸಮ್ರಾಟನೆಂದು ಪ್ರಸಿದ್ಧಿಪಡೆದ ಮೂರನೆಯ ರಾಜನೆಂದರೆ ಕನಿಷ್ಕನು. ಇವನು ಆಗಿನ ಕಾಲಕ್ಕೆ ಹೊರನಾಡುಗಳಿಂದ ದಾಳಿಗಾಗಿ ಭಾರತದೊಳಗೆ ನುಗ್ಗಿದ ಮೂರು–ನಾಲ್ಕು ಅಸಭ್ಯ ಜನಾಂಗಗಳಲ್ಲಿ 'ಕುಶಾನ' ಎಂಬ ಕುಲಕ್ಕೆ ಸೇರಿದವನು. ಈ ಕುಲವು ಯೂ–ಚೀ ಎಂಬ ಒಂದು ಅಸಭ್ಯ ಜನಾಂಗದ ಒಂದು ಒಳಪಂಗಡವು. ಭಾರತದ ಆಗಿನ ದುರ್ಬಲ ರಾಜಕೀಯ ಪರಿಸ್ಥಿತಿಯ ಲಾಭ ಪಡೆದು ಇದೇ ಕಾಲಕ್ಕೆ ಭಾರತದ ಮೇಲೆ ದಾಳಿಗಾಗಿ ಇತರ ಅಸಭ್ಯ ಜನಾಂಗಗಳೂ ನುಗ್ಗಿದವು. ಅವು ಯಾವವೆಂದರೆ– ಶಕ, ಹೂಣ, ಪಾರ್ಥಿಯನ ಮತ್ತು ಸಿಥಿಯನ ಮುಂತಾದವು. ಈ ಅಸಭ್ಯ ಜನಾಂಗಗಳ ದಾಳಿಗಳ ವಿವರಗಳು ಕೆಳಗಿನಂತಿವೆ: —

ಕ್ರಿ. ಪೂ. ೩ನೆಯ ಶತಕದ ಕೊನೆಯ ಭಾಗದಿಂದ—ಅಂದರೆ, ಅಶೋಕನ ಅನಂತರದ ಕಾಲದಿಂದ—ಕ್ರಿ. ಶ. ೨ನೆಯ ಶತಕದವರೆಗೆ ಭಾರತದಲ್ಲಿ ಈ ಮೊದಲು ವೈಭವದಿಂದ ಆಳಿದ ಸಾಮ್ರಾಜ್ಯಗಳು ಸಾಮಾನ್ಯವಾಗಿ ದುರ್ಬಲವಾಗಿದ್ದವು. ಮೌರ್ಯಮನೆತನದ ಕೊನೆಯ ಅರಸರು ದುರ್ಬಲರಾದ್ದರಿಂದಲೇ ಅವರ ಸಾಮ್ರಾಜ್ಯವು ಅವರ ಕೈಜಾರಿಹೋಯಿತು. ಬಳಿಕ, 'ಶುಂಗ' ಮತ್ತು 'ಕಣ್ವ' ಎಂಬ ಮನೆತನಗಳು ಒಂದರಹಿಂದೊಂದರಂತೆ ಮಗಧದಲ್ಲಿ ಆಳಿದವು. ಆದರೆ ಇವಾದರೂ ಅಷ್ಟೊಂದು ಬಲಿಷ್ಠವಾಗಿದ್ದಿಲ್ಲ.[೧] ಅತ್ತ ದೂರ ಪಶ್ಚಿಮದಲ್ಲಿ, ಸೆಲ್ಯುಕಸನ ವಂಶಜರ ರಾಜ್ಯವೂ ಮುರಕಳಿಗೆ ಬಂದಿತ್ತು. ಈ ರೀತಿಯಲ್ಲಿ ಆಗಿನ ಕಾಲದ ರಾಜಕೀಯ ಪರಿಸ್ಥಿತಿಯು ಹೊರಗಿನ ದಾಳಿಗಾರರಿಗೆ ಭಾರತದೊಳಕ್ಕೆ ನುಗ್ಗಲು ಎಲ್ಲ ಬಗೆಯಿಂದ ಅನುಕೂಲವಿದ್ದಿತು.

---

೧. ಆದರೂ ಶುಂಗ ಮನೆತನದ ಪುಷ್ಯಮಿತ್ರನೆಂಬ ಮೊದಲನೆಯ ಅರಸನು ಪಂಜಾಬದಲ್ಲಿ ಆಳುತ್ತಿದ್ದ "ಮಿಲಾಂದರ" ನೆಂಬ ಗ್ರೀಕ ಅರಸನ ರಾಜ್ಯವಿಸ್ತಾರದ ಪ್ರಯತ್ನವನ್ನು ತಡೆದು ಅವನನ್ನು ಸೋಲಿಸಿದನು.

**ಕನಿಷ್ಕನ ಮೊದಲು, ದಾಳಿಗಾಗಿ ಭಾರತದತ್ತ ಬಂದ ಅಸಭ್ಯ ಜನಾಂಗಗಳು :—**

ಆಗಿನ ಕಾಲದಲ್ಲಿ ಮಧ್ಯಏಶಿಯಾ, ಚೀನದ ದಕ್ಷಿಣಭಾಗ, ಇರಾಣದ ಉತ್ತರಭಾಗ ಇವುಗಳಲ್ಲಿ ಕೆಲವು ಅಸಭ್ಯ ಜನಾಂಗಗಳು ನೆಲಸಿದ್ದವು. ಮಧ್ಯಏಶಿಯಾದಲ್ಲಿ ನೆಲಸಿದವರು 'ಶಕ' ರೆಂದೆನಿಸಿದರು. ಚೀನದ ದಕ್ಷಿಣಕ್ಕೆ ಮಂಗೋಲಿಯದಲ್ಲಿ ಇದ್ದವರಿಗೆ 'ಹೂಣ'ರೆಂಬ ಹೆಸರು. ಇರಾಣದ ಉತ್ತರಭಾಗದಲ್ಲಿ 'ಪಾರ್ಥಿಯನ' ಮತ್ತು 'ಸಿಥಿಯನ' ಜನರು ನೆಲಸಿದ್ದರು. ಆದರೆ ಬ್ಯಾಕ್ಟ್ರಿಯಾ ಪ್ರದೇಶದಲ್ಲಿ ಮಾತ್ರ ಸಭ್ಯಜನಾಂಗವಾಗಿದ್ದ. ಗ್ರೀಕರು ರಾಜ್ಯ ಕಟ್ಟಿಕೊಂಡಿದ್ದರು. ಕಾರಣಾಂತರದಿಂದ ಈ ಅಸಭ್ಯ ಜನಾಂಗಗಳಲ್ಲಿ ಜಗಳಗಳು ತಲೆದೋರಿದವು. ಹೂಣರ ಯೂ-ಚೀ ತಂಡವು ಶಕರಿದ್ದಲ್ಲಿಗೆ ಒತ್ತಿಬಂದು ಅವರನ್ನು ಸ್ವಸ್ಥಾನದಿಂದ ಓಡಿಸಿತು. ಶಕರು ಗ್ರೀಕರಿದ್ದಲ್ಲಿಗೆ ನುಗ್ಗಿದರು. ಬರಬರುತ್ತ, ಶಕರು ಇರಾಣದ ಉತ್ತರಕ್ಕಿದ್ದ ಪಾರ್ಥಿಯನ ಜನಾಂಗದೊಡನೆ ಗೆಳೆತನ ಬೆಳೆಸಿ ಅವರೊಡನೆ ಬೆರೆತರು. ಮುಂದೆ ಕೆಲವು ವರುಷಗಳು ಕಳೆಯಲಾಗಿ, ಬೋಲನ ಕಣಿವೆಯ ಮಾರ್ಗದಿಂದ ಈ ಮಿಶ್ರಜನರು ಸಿಂಧ, ಪಂಜಾಬಗಳಲ್ಲಿ ಬಂದು ಸೇರಿದರು. ಇಲ್ಲಿ ಅವರು ಸಣ್ಣ ಸಣ್ಣ ರಾಜ್ಯಗಳನ್ನು ಕಟ್ಟಿಕೊಂಡು 'ಸತ್ರಪ'ರೆಂದು ಹೆಸರಾದರು. ದಿನಗಳು ಕಳೆದಂತೆ, ಶಕ, ಹೂಣ, ಪಾರ್ಥಿಯನ ಮತ್ತು ಸಿಥಿಯನ ಜನರು ಹಿಂದುಗಳೊಡನೆ ಬೆರೆತು ಸಮರಸವಾದರು. ಆದರೆ ಕುಶಾನ ಕುಲವು ಮಾತ್ರ ಹಾಗೆ ಮಾಡದೆ 'ಪುರುಷಪುರ'[೧]ದ ನೆರೆಯಲ್ಲಿ ತನ್ನ ರಾಜ್ಯ ಕಟ್ಟಿಕೊಂಡು ಅದನ್ನು ಬೆಳೆಸುತ್ತ ಪ್ರತಿಷ್ಠೆಗೆ ಬಂದಿತು. ಕನಿಷ್ಕನಿಗಿಂತ ಮೊದಲು ಈ ವಂಶದಲ್ಲಿ ೧ನೆಯ ಕಾಡ್ಫಿಸಸ ಮತ್ತು ೨ನೆಯ ಕಾಡ್ಫಿಸಸರೆಂಬ ಇಬ್ಬರು ರಾಜರು ಆಗಿಹೋದರು. ಅವರು ತಮ್ಮ ರಾಜ್ಯದ ಮೇರೆಗಳನ್ನು ವಿಸ್ತರಿಸಿದರು. ಇವರ ಅನಂತರ ಕನಿಷ್ಕನು ರಾಜನಾದನು. ಇವನು ಕ್ರಿ. ಶ. ೧೨೦ ರಿಂದ ಕ್ರಿ. ಶ. ೧೬೨ರ ವರೆಗೆ ರಾಜ್ಯಭಾರ ಮಾಡಿದನು.

೧. ಈಗಿನ ಪೇಶಾವರ.

**ಕನಿಷ್ಕನ ರಾಜ್ಯವಿಸ್ತಾರ:—**

ಪೂರ್ವಕ್ಕೆ ಮಗಧವು ಕನಿಷ್ಕನ ರಾಜ್ಯದ ಒಂದು ಮೇರೆಯೆನಿಸಿದರೆ ಪಶ್ಚಿಮಕ್ಕೆ ಇರಾಣವು ಅವನ ರಾಜ್ಯದ ಮತ್ತೊಂದು ಮೇರೆಯಾಗಿದ್ದಿತು. ಉತ್ತರದಲ್ಲಿ ಮಧ್ಯಏಶಿಯಾದಲ್ಲಿಯ ಅಲ್ತಾಯಿ ಬೆಟ್ಟಗಳು ಇವನ ಒಡೆತನ ಕ್ಕೊಳಪಟ್ಟವು. ( ಈ ಸಂದರ್ಭದಲ್ಲಿ ಕನಿಷ್ಕನು ಚೀನದ ಮೇಲೆ ಕೈಕೊಂಡ ದಾಳಿಯು ಇತಿಹಾಸಪ್ರಸಿದ್ಧವಿದೆ ) ಈಗಿನ ಮಹಾರಾಷ್ಟ್ರ ದೇಶವು ಅವನ ರಾಜ್ಯದ ದಕ್ಷಿಣ ಮೇರೆಯಾಗಿದ್ದಿತು. ಒಟ್ಟಾರೆ, ಚೀನದ ಮಧ್ಯಭಾಗದಿಂದ ಭಾರತದ ಮಧ್ಯಭಾಗದವರೆಗೆ ಮತ್ತು ಇರಾಣದಿಂದ ಬ್ರಹ್ಮದೇಶದವರೆಗೆ ಕನಿಷ್ಕನ ರಾಜ್ಯವು ಹಬ್ಬಿ, ಅದು ಸಾಮ್ರಾಜ್ಯವೆಂದು ಮೆರೆಯಿತು. ಇದ ರಲ್ಲಿ ಕಾಶ್ಮೀರ, ಸಿಂಧ, ಕಾಶಿ ದೇಶಗಳಲ್ಲದೆ, ಕಾಬೂಲ, ಯಾರ್ಕಂದ, ಕಾಶ ಗರ ಮುಂತಾದ ಪ್ರದೇಶಗಳೂ ಸಮಾವೇಶವಾದವು ( ಚಿತ್ರ ೨ ನೋಡಿರಿ ).

**ಕನಿಷ್ಕನ ಬೌದ್ಧ-ಧರ್ಮ:—**

ಮಗಧದ ಮೇಲೆ ಏರಿಹೋದಾಗ ಕನಿಷ್ಕನಿಗೆ ಬುದ್ಧನ ಕಮಂಡಲವು ದೊರೆಯಿತು. ಮತ್ತು ಅಲ್ಲಿಯ ಬೌದ್ಧ ಕವಿಯಾದ 'ಅಶ್ವಘೋಷ'[೧] ನ ಭೆಟ್ಟಿಯಾಯಿತು. ಇವನ ಉಪದೇಶದಿಂದಲೆ ಕನಿಷ್ಕನು ಬೌದ್ಧಮತಾನು ಯಾಯಿಯಾದನು. ಈ ಮೊದಲು ಕನಿಷ್ಕನು ಶಿವಭಕ್ತನಿದ್ದನು. ಅವನ ನಾಣ್ಯಗಳ ಮೇಲೆ ಸೂರ್ಯ, ಚಂದ್ರ, ಅಗ್ನಿ, ಶಿವ ಮುಂತಾದ ಮೂರ್ತಿಗಳ ಚಿತ್ರಗಳು ಕಂಡುಬರುತ್ತಿದ್ದವು. ಅಶ್ವಘೋಷನು ಕನಿಷ್ಕನನ್ನು ಹಿಂಬಾಲಿಸಿ ಬಂದು ಅವನ ಓಲಗಕ್ಕೆ ಭೂಷಣಪ್ರಾಯನಾದನು. ಇವನ ಹೊರತಾಗಿ ಅವನ ಓಲಗದಲ್ಲಿ ವಸುಮಿತ್ರ, ಪಾರ್ಶ್ವರೆಂಬ ಬೌದ್ಧ ಪಂಡಿತರಿದ್ದರು. ಇವರೆಲ್ಲರ ಸಹಾಯದಿಂದ ಕನಿಷ್ಕನು, ಅಶೋಕನಂತೆ, ಬೌದ್ಧ ಮಹಾಸಭೆ ಯನ್ನು ನೆರೆಯಿಸಿದನು. ಇದೇ ನಾಲ್ಕನೆಯ ಮತ್ತು ಕೊನೆಯ ಬೌದ್ಧ ಮಹಾಸಭೆ. ಈ ಸಭೆಗೆ ಸುಮಾರು ೪೦೦ ಬೌದ್ಧ ಭಿಕ್ಷುಗಳು ಆಗಮಿಸಿದರು. ಇದು ಕಾಶ್ಮೀರದಲ್ಲಿ[೨] ಜರುಗಿತು. ಇದರಲ್ಲಾದ ನಿರ್ಣಯಗಳನ್ನು ಕನಿಷ್ಕನು

---

೧. ಇವನೊಬ್ಬ ತತ್ತ್ವಜ್ಞಾನಿ, ಕವಿ ಮತ್ತು ನಾಟಕಕಾರ. ಬುದ್ಧಚರಿತೆಯೆಂಬ ಗ್ರಂಥವನ್ನು ಬರೆದಿರುವನು.

೨. ಶ್ರೀನಗರದ ಸಮೀಪದ ಕೊಂಡವನವೆಂಬಲ್ಲಿ.

ಒಂದು ತಾಮ್ರಪಟದ ಮೇಲೆ ಬರೆಯಿಸಿಟ್ಟನು. ಈ ನಿರ್ಣಯಗಳ ಪರಿಣಾಮವಾಗಿ ಬೌದ್ಧಧರ್ಮದಲ್ಲಿ 'ಮಹಾಯಾನ' ಮತ್ತು 'ಹೀನಯಾನ'ಗಳೆಂಬ ಎರಡು ಪಂಥಗಳು ತಲೆದೋರಿದವು. ಮನುಷ್ಯನ ಅಂತಿಮ ಗುರಿಯಾದ ಮೋಕ್ಷಸಾಧನೆಯ ಬಗೆಗೆ ಇವು ಬೇರೆ ಬೇರೆ ಮಾರ್ಗಗಳನ್ನು ಸೂಚಿಸುತ್ತವೆ. ಮಹಾಯಾನದಲ್ಲಿಯ ನಿಯಮಗಳು ಮೋಕ್ಷಪ್ರಾಪ್ತಿಗೆ ಹಿರಿಯ ಸಾಧನಗಳೆಂದು ಈ ಪಂಥದವರು ತಿಳಿದರು. ಈ ಪಂಥವು ಮೂರ್ತಿಪೂಜೆಯನ್ನು ಒಪ್ಪುತ್ತದೆ. ಬುದ್ಧನ ಮೂರ್ತಿಯನ್ನು ಪೂಜಿಸುವದು ಪ್ರಾರಂಭವಾದುದು ಈ ಕಾಲದಿಂದಲೇ. ಬುದ್ಧನು ದೇವರ ಅವತಾರವೆಂದೂ ಈ ಪಂಥದವರ ಬಲವಾದ ನಂಬಿಕೆ. ಈ ಪಂಥದ ತತ್ತ್ವಗಳು ಏಶಿಯಾಖಂಡದ ಉತ್ತರ, ಪೂರ್ವ ಮತ್ತು ಪಶ್ಚಿಮ ಭಾಗಗಳಿಗೆ ತಲುಪಿ ಅಲ್ಲಿ ಪ್ರಸಾರಗೊಂಡವು. ಹೀನಯಾನದ ತತ್ತ್ವಗಳು ಮೋಕ್ಷಪ್ರಾಪ್ತಿಯ ಕಿರಿಯ ಸಾಧನಗಳೆನಿಸಿದವು. ಈ ಪಂಥವು ಭಾರತದ ದಕ್ಷಿಣ ಭಾಗದಲ್ಲಿ ಪ್ರಸಾರ ಹೊಂದಿತು. ಧರ್ಮಪ್ರಸಾರಕ್ಕಾಗಿ ಅಶೋಕನಂತೆ ಕನಿಷ್ಕನೂ ಧರ್ಮೋಪದೇಶಕರನ್ನು ದೂರದೂರದ ದೇಶಗಳಿಗೆ ಕಳುಹಿಕೊಟ್ಟನು. ಬೌದ್ಧಧರ್ಮಕ್ಕಾಗಿ ಇವನು ಮಾಡಿದ ಕಾರ್ಯಗಳನ್ನು ನೆನೆದು ಬೌದ್ಧರು ಇವನನ್ನು '**ಎರಡನೆಯ ಅಶೋಕ**' ಎಂದು ಕರೆಯುವ ರೂಢಿಯುಂಟಾಯಿತು.

**ಕನಿಷ್ಕನ ಯೋಗ್ಯತೆ:—**

ಮೊದಮೊದಲು ಕನಿಷ್ಕನು ಅಸಭ್ಯ ಮತ್ತು ಕ್ರೂರ ಎಂದು ಕಂಡು ಬಂದರೂ ಕ್ರಮೇಣ ಅವನು ಉದಾರಮತವಾದಿಯಾದನು. ತಾನು ಬೌದ್ಧ ಧರ್ಮವನ್ನು ಸ್ವೀಕರಿಸಿದ ಬಳಿಕ, ಧರ್ಮಪ್ರಸಾರಕ್ಕಾಗಿ ದೂರದೂರದವರೆಗೂ ಧರ್ಮದೂತರನ್ನು ಅಟ್ಟಿದನು. ತಿಬೇಟ, ಖೋತಾನ, ಮಂಗೋಲಿಯಾ ಮೊದಲಾದ ಎಷ್ಟೋ ಪರನಾಡುಗಳಲ್ಲಿ ಬೌದ್ಧಧರ್ಮವು ಜನಪ್ರಿಯವಾಯಿತು. ಆದ್ದರಿಂದ ಆ ದೇಶಗಳಲ್ಲಿ ಕನಿಷ್ಕನ ಹೆಸರು ಈಗಲೂ ಆದರಣೀಯವಾಗಿ ಉಳಿದಿರುವದು. ಆದರೂ ಕನಿಷ್ಕನು ಪರಧರ್ಮಸಹಿಷ್ಣುವಾಗಿದ್ದನೆಂದು ತಿಳಿದುಬರುತ್ತದೆ.

ಕನಿಷ್ಕನು ಒಳ್ಳೆ ವಿದ್ಯಾಪಕ್ಷಪಾತಿಯೂ ಆಹುದು. ಅನೇಕ ವಿದ್ವಾಂಸರಿಗೆ ಇವನ ಓಲಗದಲ್ಲಿ ಆಶ್ರಯುವಿದ್ದಿತು. ಅವರಿಂದ ಎಷ್ಟೋ ಬೌದ್ಧ ಗ್ರಂಥಗಳು ಸಂಸ್ಕೃತಕ್ಕೆ ಭಾಷಾಂತರವಾದವು. 'ಚರಕ' ನೆಂಬವನು ವೈದ್ಯವಿದ್ಯಾನಿಪುಣನು.[೧] 'ವಾಗ್ಭಟ'ನೆಂಬ ಬೇರೊಬ್ಬ ಪ್ರಸಿದ್ಧ ವೈದ್ಯನೂ ಇದೇ ಕಾಲದವನೆಂದು ಹೇಳಿಕೆಯಿದೆ. ಶಸ್ತ್ರಕ್ರಿಯೆಯು ಈ ಕಾಲದಲ್ಲಿ ಒಳ್ಳೇ ಮೇಲ್ಮಟ್ಟಕ್ಕೆ ಮುಟ್ಟಿತ್ತು. ಆಗಿನ ಪಂಡಿತರು ಅತಿಸೂಕ್ಷ್ಮವಾದ ಶಸ್ತ್ರಗಳಿಂದ ಕೂದಲೆಳೆಯನ್ನು ಇಬ್ಭಾಗವಾಗಿ ಸೀಳುವಷ್ಟು ಬಲ್ಲವರಾಗಿದ್ದರಂತೆ! ಶಿಲ್ಪಕಲೆಯಲ್ಲಿ ಕನಿಷ್ಕನು ಬಹಳ ಮನಸ್ಸು ಹಾಕಿದನು. ಪೇಶಾವರ ಮತ್ತು ಇತರ ಸ್ಥಳಗಳಲ್ಲಿ ಇವನು ಸ್ತೂಪ, ವಿಹಾರ ಮುಂತಾದವುಗಳನ್ನು ಕಟ್ಟಿಸಿದನೆಂದು ಕಂಡುಬರುತ್ತದೆ. ಪೇಶಾವರದ ವಿಹಾರದಲ್ಲಿ ಅರ್ಹತರೂ[೨] ಶಾಸ್ತ್ರಕಾರರೂ ವಾಸವಾಗಿದ್ದರಂತೆ. ಅಲ್ಲಿ ಇವನು ಎತ್ತರವಾದೊಂದು ಗೋಪುರವನ್ನು ಕಟ್ಟಿಸಿದನು.

**ವ್ಯಾಪಾರ :—**

ಪರದೇಶದ ವ್ಯಾಪಾರಕ್ಕೆ ಕನಿಷ್ಕನು ವಿಶೇಷವಾಗಿ ಉತ್ತೇಜನಕೊಟ್ಟನು. ಆದ್ದರಿಂದ, ಗ್ರೀಸ ಮತ್ತು ರೋಮ ದೇಶಗಳಕೂಡ ಭಾರತದ ವ್ಯಾಪಾರವು ಆ ಕಾಲದಲ್ಲಿ ಭರದಿಂದ ಸಾಗಿತು. ಭಾರತೀಯರು ಇಜಿಪ್ತ, ಮೆಸಿಡೋನಿಯಾ ಹಾಗೂ ಜಾವಾ, ಬೋರ್ನಿಯೊ, ಬಾಲಿ ಮುಂತಾದ ಪರದೇಶಗಳಿಗೆ ವ್ಯಾಪಾರಕ್ಕಾಗಿ ಹೋಗಿ ಒಕ್ಕಲಾದರು.

## ಅಭ್ಯಸನಗಳು.

೧. ಕೆಳಗೆ ಕೆಲವು ವಾಕ್ಯಗಳನ್ನು ಕೊಟ್ಟಿದೆ. ಪ್ರತಿಯೊಂದು ವಾಕ್ಯದ ಕೊನೆಗೆ ಕಂಸಗಳಲ್ಲಿ ಕೆಲವು ಶಬ್ದಗಳಿವೆ. ವಾಕ್ಯದ ತೆರವಿದ್ದ ಸ್ಥಳದಲ್ಲಿ ಕಂಸಗಳಲ್ಲಿಯ ಯೋಗ್ಯ ಶಬ್ದವನ್ನು ತುಂಬಿರಿ :—

ಅ) ಕನಿಷ್ಕನು..........ಕುಲಕ್ಕೆ ಸೇರಿದವನು. ( ಸಿಥಿಯನ, ಕುಶಾನ, ಶಕ )

---

೧. ಇವನು ಬರೆದ ಚರಕ ಮತ್ತು ಸುಶ್ರುತ ಎಂಬ ಗ್ರಂಥಗಳು ವೈದ್ಯವಿದ್ಯೆಯಲ್ಲಿ ಆಧಾರಗ್ರಂಥಗಳೆನಿಸಿರುವವು.

೨. ಇವರು ಬೌದ್ಧ ಭಿಕ್ಷುಗಳು

ಆ) ಕನಿಷ್ಕನಿಂದ....... ಧರ್ಮವು ಎತ್ತಿ ಹಿಡಿಯಲ್ಪಟ್ಟಿತು. (ವೈದಿಕ, ಜೈನ, ಬೌದ್ಧ.)

ಇ) ..............ಕನಿಷ್ಕನಿಗೆ ಬೌದ್ಧ ಧರ್ಮೋಪದೇಶ ಮಾಡಿದನು. (ಅಶ್ವಘೋಷ, ಭದ್ರಬಾಹು, ಉಪಗುಪ್ತ.)

ಈ) ಕನಿಷ್ಕನ ರಾಜಧಾನಿಯು......................( ಪಾಟಲೀಪುತ್ರ, ಪೇಶಾವರ, ಉಜ್ಜಯಿನಿ.)

೨. ಕೆಳಗೆ ಕೊಟ್ಟ ರಾಜವಂಶಗಳ ಆಳಿಕೆಯನ್ನು ಕಾಲಾನುಕ್ರಮವಾಗಿ ಹೊಂದಿಕೆಯಾಗುವಂತೆ ಬರೆಯಿರಿ :—

ಕಣ್ವ, ಶುಂಗ, ಮೌರ್ಯ ವಂಶಗಳು.

೩. 'ಕನಿಷ್ಕನು ಎರಡನೆಯ ಅಶೋಕ.' ಇದು ಹೇಗೆಂಬುದನ್ನು ಮೂರು ನಾಲ್ಕು ವಾಕ್ಯಗಳಲ್ಲಿ ಉತ್ತರಿಸಿರಿ.







ಚಿತ್ರ ೧. ಒಂದನೆಯ ಚಂದ್ರಗುಪ್ತನ ನಾಣ್ಯಗಳು.

ಸಮುದ್ರಗುಪ್ತನ ಸಾಮ್ರಾಜ್ಯ ಮತ್ತು ದಕ್ಷಿಣ ದಿಗ್ವಿಜಯ

ಸಿಂಧುನದಿ

ಪಾಟಲೀಪುತ್ರ

ಮಾಳವಾ

ಸೌರಾಷ್ಟ್ರ

ಮಹೇಂದ್ರಗಿರಿ

ಅರಬ್ಬೀ ಸಮುದ್ರ

ಬಂಗಾಲ ಉಪಸಾಗರ

ಚೋಳ

ಚಿತ್ರ ೨. ಸಮುದ್ರಗುಪ್ತನ ಸಾಮ್ರಾಜ್ಯ.

# ೧೦ನೆಯ ಪ್ರಕರಣ

## ಗುಪ್ತ ಸಮ್ರಾಟರು.

(ವಿಜ್ಞಾನ ಹಾಗು ಸಾಹಿತ್ಯಗಳ ಸುವರ್ಣಯುಗ. ವರ್ಣಾಶ್ರಮಪದ್ಧತಿಯ ಬೆಳವಣಿಗೆ ; ಮತಾಚರಣೆಯ ಅತಿನಿಷ್ಠೆ. ಕರ್ಮಠತನ—;ದೇಗುಲಗಳೂ ಮೂರ್ತಿಗಳೂ ; ಪುರಾಣಗಳು. )

ಕುಶಾನ ವಂಶದ ಅರಸರು ಕನಿಷ್ಕನ ಅನಂತರ ಸುಮಾರು ೬೦ ವರುಷಗಳ ವರೆಗೆ[೧] ಉತ್ತರ ಭಾರತದಲ್ಲಿ ದೊರೆತನವನ್ನು ನಡೆಸುತ್ತಲೇ ಇದ್ದರು. ಆದರೆ ಕೊನೆಯ ಅರಸರು ದುರ್ಬಲರಾದ್ದರಿಂದ, ಅವರು ವಾಯವ್ಯ ದಿಕ್ಕಿನಿಂದ ನುಗ್ಗಿ ಬರುತ್ತಿದ್ದ ಅಸಭ್ಯ ಜನಾಂಗದವರನ್ನು—ಶಕ, ಪಾರ್ಥಿಯನ ಮತ್ತು ಸಿಥಿಯನ್ನರನ್ನು—ಎದುರಿಸಿ ತಡೆಯಲಾರದಾದರು. ಇವರ ದಾಳಿಗಳು ಬಹು ಭೀಕರವಾಗಿದ್ದವು. ಬರಬರುತ್ತ ಶಕರು ಪಶ್ಚಿಮ ಭಾರತದ ಸೌರಾಷ್ಟ್ರ, ಮಾಳವಾಗಳಲ್ಲಿ ೨ನೆಯ ರುದ್ರದಾಮನನ ಮುಖಂಡತ್ವದಲ್ಲಿ ಒಂದು ರಾಜ್ಯವನ್ನೇ ಕಟ್ಟಿಕೊಂಡರು. ಆದರೆ ಕೆಲವು ಶಕರಾಜರು ಪ್ರಜಾಪೀಡನೆಯನ್ನು ಮಾಡಹತ್ತಿದರು. ಯೂ—ಚಿ ಜನಾಂಗದ ಕೆಲವು ತಂಡಗಳು ಗಂಗಾ, ಯಮುನಾ ನದಿಗಳ ಕೊಳ್ಳದವರೆಗೂ ದಾಳಿ ಮಾಡಿದವು.

**ಗುಪ್ತ ವಂಶದ ಉದಯ ಮತ್ತು ರಾಜ್ಯಭಾರ:—**

ಉತ್ತರ ಭಾರತದಲ್ಲಿ ಮೇಲೆ ಹೇಳಿದ ಪರಿಸ್ಥಿತಿ ಇದ್ದಾಗ, ಅಯೋಧ್ಯೆ ಮತ್ತು ಅಲಹಾಬಾದಗಳ ನಡುವಿನ ಪ್ರದೇಶಗಳಲ್ಲಿ ‘ ಗುಪ್ತ ’ನೆಂಬ ಹೆಸರಿನ ಒಬ್ಬ ಸರದಾರನು ಸ್ವತಂತ್ರನಾಗಿ ರಾಜ್ಯಭಾರ ಮಾಡುತ್ತಿದ್ದನು. ಇವನ ವಂಶದಲ್ಲಿ ೧ನೆಯ ಚಂದ್ರ (ಚಂದ್ರಗುಪ್ತ) ನೆಂಬವನಿಗೆ ಲಿಚ್ಛವಿ ಮನೆತನದ ಕುಮಾರದೇವಿಯೆಂಬ ರಾಜಕನ್ಯೆಯೊಡನೆ ಮದುವೆಯಾಯಿತು. ಈ ಸಂಬಂಧದಿಂದ ಹುರುಪುಗೊಂಡ ಚಂದ್ರಗುಪ್ತನು ಲಿಚ್ಛವಿಯವರ

---

೧. ಕ್ರಿ. ಶ. ೨೨೦ ರ ವರೆಗೆ.

ಸಹಾಯದಿಂದ ಪಾಟಲೀಪುತ್ರದ ಮೇಲೆ ಏರಿಹೋಗಿ ಅದನ್ನು ಗೆದ್ದನು. [೧] ಕ್ರಿ. ಶ. ೩೨೦ರಲ್ಲಿ ಪಟ್ಟವೇರಿ ರಾಜನಾದನು. ಬರಬರುತ್ತ, ದಕ್ಷಿಣ ಬಿಹಾರ, ಅಲಹಾಬಾದ, ಅಯೋಧ್ಯೆಗಳನ್ನು ಗೆದ್ದು ಗುಪ್ತವಂಶದ ಅರಸರಲ್ಲಿ ಮೊದಲನೆಯ ಸಮ್ರಾಟನೆಂದು ಹೆಸರು ಪಡೆದನು. ಅವನ ನಾಣ್ಯಗಳ ಮೇಲೆ ಅವನ ಮತ್ತು ಅವನ ಹೆಂಡತಿಯ ಚಿತ್ರಗಳು ಕೂಡಿಯೆ ಕಂಡುಬರುತ್ತವೆ (ಚಿತ್ರ ೧ ನೋಡಿರಿ). ಇವನು ಪಟ್ಟವೇರಿದ ವರುಷದಿಂದ ಗುಪ್ತಶಕೆಯು ಪ್ರಾರಂಭವಾಯಿತು. ೧೦ ವರುಷದ ಆಳಿಕೆಯನಂತರ[೨] ಇವನು ಮರಣಹೊಂದಿದನು.

## ಸಮುದ್ರಗುಪ್ತ (ಕ್ರಿ. ಶ. ೩೩೦–೩೭೫).

೧ನೆಯ ಚಂದ್ರಗುಪ್ತನ ಮರಣದ ಅನಂತರ, ಅವನ ಮಗನಾದ ಸಮುದ್ರಗುಪ್ತನು ಪಟ್ಟವೇರಿ ಗುಪ್ತವಂಶದ ಎಲ್ಲ ಅರಸರಿಗೂ ಮಿಗಿಲಾದ ಪ್ರಖ್ಯಾತಿಯನ್ನು ಪಡೆದನು. ರಾಜ್ಯವಿಸ್ತಾರದ ಹಂಬಲವು ಇವನಲ್ಲಿ ವಿಶೇಷವಾಗಿತ್ತೆಂದು ಹೇಳಬಹುದು. ಏಕೆಂದರೆ, ತನ್ನ ಆಳಿಕೆಯ ಕಾಲಾವಧಿಯಲ್ಲಿ ಇವನು ಯಾವಾಗಲೂ ಒಂದಿಲ್ಲೊಂದು ಯುದ್ಧದಲ್ಲಿ ತೊಡಗಿರುತ್ತಿದ್ದನು. ತಾನು ಕೈಕೊಂಡ ದಿಗ್ವಿಜಯದ ವಿವರ ಮತ್ತು ಗೆದ್ದ ರಾಜ್ಯಗಳ ಹೆಸರುಗಳನ್ನು ಇವನು ಅಶೋಕನ ಶಿಲಾಶಾಸನಗಳ ಕೆಳಗೇ ಬರೆಯಿಸಿಟ್ಟಿರುವನು. ಒಟ್ಟಾರೆ ಸಮುದ್ರಗುಪ್ತನು ೧೨ ರಾಜರನ್ನು ಗೆದ್ದನೆಂದು ತಿಳಿದುಬರುತ್ತದೆ. ಈಗಿನ ರೋಹಿಲಖಂಡ, ಮಧ್ಯಭಾರತ, ವಿಂಧ್ಯ ಪರ್ವತದ ಪ್ರದೇಶ, ಮಹಾನದೀದಂಡೆ, ಗೋದಾವರೀ ಜಿಲ್ಹೆ, ಮದ್ರಾಸದ ಉತ್ತರಭಾಗ, ಅರ್ಕಾಟ ಮತ್ತು ಕಂಚಿ ರಾಜ್ಯಗಳನ್ನು ಗೆದ್ದು, ಅಲ್ಲಿಯ ರಾಜರನ್ನು ತನ್ನ ಅಧೀನರನ್ನಾಗಿ ಮಾಡಿಕೊಂಡನು (ಚಿತ್ರ ೨ ನೋಡಿರಿ). ಆದರೆ ದಕ್ಷಿಣಭಾರತದಲ್ಲಿಯ ರಾಜ್ಯಗಳನ್ನು ಆಯಾ ಅರಸರಿಗೆ ಮರಳಿಕೊಟ್ಟು ಅವರನ್ನು ತನ್ನ ಸಾಮಂತರನ್ನಾಗಿ ಮಾಡಿಕೊಂಡನು. ಸಿಂಹಳದ್ವೀಪದ ಅರಸನು ಇವನೊಂದಿಗೆ ಸ್ನೇಹದಿಂದಿದ್ದನು. ತಾನು ಚಕ್ರವರ್ತಿಯೆಂದು ಪ್ರಕಟಿಸಲು ಸಮುದ್ರಗುಪ್ತನು ಒಂದು ಅಶ್ವಮೇಧಯಜ್ಞವನ್ನು ಮಾಡಿದನು. ಇವನಿಗೆ

---

೧. ಮಗಧವು ಇವನಿಗೆ ವರದಕ್ಷಿಣೆಯಾಗಿ ದೊರೆಯಿತೆಂದು ಕೆಲವರ ಅಭಿಪ್ರಾಯ.

೨. ಕ್ರಿ. ಶ. ೩೩೦ರಲ್ಲಿ

'ಚಂದ್ರಪ್ರಕಾಶ' ಮತ್ತು 'ಬಾಲಾದಿತ್ಯ' ಎಂಬ ಬಿರುದುಗಳಿದ್ದವು. ಇವನ ಕಾಲದ ನಾಣ್ಯಗಳು ಗರುಡ, ಯಜ್ಞಾಶ್ವ ಮತ್ತು ವೀಣಾಪಾಣಿ ಸಮುದ್ರ ಗುಪ್ತನ ಚಿಹ್ನಗಳಿಂದ ಕೂಡಿವೆ (ಚಿತ್ರ ೩ ನೋಡಿರಿ). ತಾನು ವೈದಿಕ ಧರ್ಮದವನಿದ್ದರೂ ಇವನು ಉಳಿದ ಧರ್ಮಗಳನ್ನು ಪ್ರೀತಿಸುತ್ತಿದ್ದನು. ಸ್ವತಃ ಕವಿಯಿದ್ದು, ಕವಿ, ಶಾಸ್ತ್ರಜ್ಞ ಮುಂತಾದವರಿಗೆ ಆಶ್ರಯಕೊಟ್ಟನು. ಇವನು ಕ್ರಿ. ಶ. ೩೭೫ ರಲ್ಲಿ ಮರಣಹೊಂದಿದನು.

ಗುಣಗಳು:— ಸಮುದ್ರಗುಪ್ತನು ಮಿಗಿಲಾದ ಪರಾಕ್ರಮಿಯಾದರೂ ದಯಾಳು. ಇವನು ವಿದ್ಯಾಭಿಮಾನಿಯೂ ಮತ್ತು ಪರಧರ್ಮಸಹಿಷ್ಣುವೂ ಇದ್ದನು. ಲಲಿತಕಲೆ (ಸಂಗೀತ, ವಾದ್ಯ ಮುಂತಾದವು) ಗಳ ಮೇಲೆ ಇವನಿಗೆ ಪ್ರೀತಿಯಿತ್ತು.

**೨ನೆಯ ಚಂದ್ರಗುಪ್ತ** (ಕ್ರಿ. ಶ. ೩೭೫–೪೧೩).

ಇವನು ಸಮುದ್ರಗುಪ್ತನ ಮಗನು. ತಂದೆಯ ಮರಣದ ಅನಂತರ, 'ವಿಕ್ರಮಾದಿತ್ಯ' ನೆಂಬ ಬಿರುದು ಧರಿಸಿ ಪಟ್ಟವೇರಿದನು. ೩೮ ವರುಷ ರಾಜ್ಯಭಾರ ಮಾಡಿದನು. ತಂದೆಯಂತೆ ಇವನಾದರೂ ದಿಗ್ವಿಜಯದ ಧೋರಣೆಯನ್ನು ಮುಂದುವರಿಸಿದಂತೆ ತೋರುತ್ತದೆ. ಶರೀರಸಂಬಂಧದಿಂದ ಕೆಲವು ಅರಸರೊಂದಿಗೆ ಸ್ನೇಹ ಬೆಳಸಿದನು. ಪಶ್ಚಿಮದಲ್ಲಿ ಸೌರಾಷ್ಟ್ರ, ಮಾಳವಾಗಳಲ್ಲಿಯ ಶಕರಾಜ್ಯಗಳ ಮೇಲೆ ಏರಿಹೋಗಿ ಉಜ್ಜಯಿನಿಯನ್ನು ಜಯಿಸಿ, ಅದನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡನು. ಶಕರನ್ನು ಹೊಡೆದೋಡಿಸಿದ್ದರಿಂದ ಇವನಿಗೆ 'ಶಕಾರಿ' ಯೆಂಬ ಬಿರುದು ಸಲ್ಲಿತು. ಉಜ್ಜಯಿನಿಯು ವೈಭವಶಿಖರಕ್ಕೆ ಮುಟ್ಟಿತು. ಇವನ ಕಾಲಕ್ಕೆ ವಿಜ್ಞಾನ, ಸಾಹಿತ್ಯಗಳು ವಿಶೇಷ ಉಚ್ಚ ತರಗತಿಗೆ ಮುಟ್ಟಿದಂತೆ ಕಾಣುವವು. ಇವನ ಓಲಗದಲ್ಲಿ 'ನವರತ್ನ'ರೆಂಬ ಒಂಬತ್ತು ವಿದ್ವಾಂಸರಿದ್ದರು.[೧] ಅವರಲ್ಲಿ

---

೧. ೧. ಧನ್ವಂತರಿ (ರಾಜವೈದ್ಯ) ೨. ಕ್ಷಪಣಕ (ಜ್ಯೋತಿಷಿ) ೩. ಅಮರಸಿಂಹ (ಕೋಶಕಾರ) ೪. ಶಂಕು (ಶಿಲ್ಪಿ)
೫. ವೇತಾಲಭಟ್ಟ (ಯಾಂತ್ರಿಕ) ೬. ಘಟಕರ್ಪರ (ಕವಿ) ೭. ಕಾಲಿದಾಸ (ಕವಿ ಮತ್ತು ನಾಟಕಕಾರ)
೮. ವರಾಹಮಿಹಿರ (ಜ್ಯೋತಿಷಿ) ೯. ವರರುಚಿ. (ಕವಿ ಮತ್ತು ವ್ಯಾಕರಣಕಾರ)

ಕಾಲಿದಾಸ, ಧನ್ವಂತರಿ, ವರಾಹಮಿಹಿರ, ಅಮರಸಿಂಹರೆಂಬವರು ಈಗಲೂ ಪ್ರಸಿದ್ಧರಿದ್ದಾರೆ. ನ್ಯಾಯದಾನ ಮಾಡುವಾಗ ಯೋಗ್ಯ ತೀರ್ಪು ಕೊಡುವದರಲ್ಲಿ ವಿಕ್ರಮಾದಿತ್ಯನು ಹೆಸರಾದನು.

**ಚಂದ್ರಗುಪ್ತನ ರಾಜ್ಯಪರಿಸ್ಥಿತಿ:—**( ಫಾಹಿಯೆನನೆಂಬ ಚೀನ ಪ್ರವಾಸಿಯ ವೃತ್ತಾಂತದ ಮೇರೆಗೆ— )

ಎರಡನೆಯ ಚಂದ್ರಗುಪ್ತನ ಆಳಿಕೆಯಲ್ಲಿ ಫಾಹಿಯೆನನೆಂಬ ಚೀನ ದೇಶದ ಬೌದ್ಧ ಯಾತ್ರಿಕನು ಬೌದ್ಧರ ಪುಣ್ಯ ಕ್ಷೇತ್ರಗಳನ್ನು ಸಂದರ್ಶಿಸಲು ಭಾರತಕ್ಕೆ ಬಂದು ಆರು ವರುಷ ಅತ್ತಿತ್ತ ಸುತ್ತಾಡಿದನು. ಆಗಿನ ಜನಜೀವನ, ವೇಷಭೂಷಣ, ರೀತಿನೀತಿಗಳ ಮೇಲೆ ಇವನ ಬರಹಗಳು ಹೆಚ್ಚಾಗಿ ಬೆಳಕನ್ನು ಕೆಡಹುವವು. ಇವನು ಹೇಳುವದೇನಂದರೆ, “ ಜನರು ಅಸಂಖ್ಯಾತರಿದ್ದು, ಸುಖದಿಂದಿರುವರು. ಶಿಕ್ಷೆಗಳು ಸೌಮ್ಯವಾಗಿವೆ. ಶಿರಚ್ಛೇದ ಇಲ್ಲವೆ ಇನ್ನಿತರ ಯಾವದೇ ತರದ ಮರಣದಂಡನೆಯಿಲ್ಲ. ಅನ್ನಛತ್ರ, ಧರ್ಮಶಾಲೆ ಮತ್ತು ಪ್ರವಾಸಿಕರ ಮನೆಗಳ ವ್ಯವಸ್ಥೆಗಾಗಿ ಸಮಾಜದ ಎಲ್ಲ ವರ್ಗದವರೂ ಸಹಾಯ ಮಾಡುವರು. ಬಡವರಿಗೆ ಔಷಧೋಪಚಾರವು ಪುಕ್ಕಟೆಯಾಗಿ ದೊರೆಯುತ್ತದೆ. ಪಾಟಲೀಪುತ್ರದಲ್ಲಿ ಪೌರನೀತಿ ಅಥವಾ ಸಮಾಜಧರ್ಮವನ್ನು ಕಲಿಸಲು ಎರಡು ವಿಹಾರಗಳಿವೆ. ಬೌದ್ಧ ಮತ್ತು ಹಿಂದು ಧರ್ಮಗಳಲ್ಲಿ ಪರಸ್ಪರ ಗೌರವ, ಸೌಹಾರ್ದಗಳು ಕಂಡು ಬರುತ್ತವೆ. ” ಇಂತು ಮುಂತಾಗಿ.

೨ನೆಯ ಚಂದ್ರಗುಪ್ತನ ಅನಂತರ ಆಗಿಹೋದ ಅರಸರಲ್ಲಿ ಕುಮಾರಗುಪ್ತ ಮತ್ತು ಸ್ಕಂದಗುಪ್ತರೆಂಬವರು ತುಸುಮಟ್ಟಿಗೆ ಹೆಸರಾದರು. ಕುಮಾರಗುಪ್ತನೂ ಅಶ್ವಮೇಧಯಾಗವನ್ನು ಮಾಡಿದನು. ಅವನ ಮಗನಾದ ಸ್ಕಂದಗುಪ್ತನ ಆಳಿಕೆಯಲ್ಲಿ ಹೂಣರ ಉಪಟಳವು ಉಗ್ರಸ್ವರೂಪವನ್ನು ತಾಳಿತು. ಮೊದಮೊದಲು ಸ್ಕಂದಗುಪ್ತನು ಅವರ ದಾಳಿಯನ್ನು ತಡೆದು ಅವರನ್ನು ಹಿಂದಕ್ಕಟ್ಟಿದರೂ ಅವು ಮೇಲಿಂದಮೇಲೆ ನಡೆಯುಹತ್ತಿದವು. ಇವನ ಮರಣದನಂತರವಂತೂ ‘ ತೋರಮಾನ ’ ಎಂಬವನ ಮುಖಂಡತ್ವದಲ್ಲಿ ಹೂಣರು ಗುಪ್ತರನ್ನು ಸೋಲಿಸಿ ಉಜ್ಜಯಿನಿಯ ರಾಜ್ಯವನ್ನು ಕೈವಶಮಾಡಿಕೊಂಡರು.

ಗುಪ್ತವಂಶಜರು ಹಾಗೂಹೀಗೂ ಕ್ರಿ. ಶ. ೩೩೫ರ ವರೆಗೆ ರಾಜ್ಯಭಾರ ನಡಿಸಿಕೊಂಡು ಹೋದರು. ಕೊನೆಗೆ ಈ ವಂಶವು ಮುಳುಗಿಹೋಯಿತು.

**ಸುವರ್ಣಯುಗ :**

ಗುಪ್ತ ಅರಸರ ಕಾಲವನ್ನು ಭಾರತದ ಇತಿಹಾಸದಲ್ಲಿ ಸುವರ್ಣಯುಗ (ಚಿನ್ನದ ಕಾಲ) ಎಂದು ಕರೆಯಲಾಗುತ್ತದೆ. ಏಕೆಂದರೆ, ಈ ಅವಧಿಯಲ್ಲಿ ಭಾರತೀಯ ಸಂಸ್ಕೃತಿಯು ಹಿರಿದಾದ ಘನತೆಗೇರಿತು. ಗುಪ್ತ ಅರಸರು ಪರಾಕ್ರಮ, ಬುದ್ಧಿವಂತಿಕೆಗಳಿಂದ ಕೂಡಿದವರಾಗಿದ್ದರು. ಕೊನೆಕೊನೆಗಿನ ಹೂಣರ ದಾಳಿಗಳ ಹೊರತಾಗಿ ಯಾವ ಪರರಾಜರೂ ಇವರ ಆಳಿಕೆಯಲ್ಲಿ ಭಾರತದ ಮೇಲೆ ದಾಳಿಮಾಡುವ ಧೈರ್ಯ ತಾಳಲಿಲ್ಲ. ಗುಪ್ತರ ಸಾಮ್ರಾಜ್ಯವು ವಿಶಾಲವಿತ್ತು. ಜನರು ಸುಖದಿಂದಿದ್ದರು. ಬೇರೆ ಬೇರೆ ಧರ್ಮಗಳು ಉನ್ನತಿಯನ್ನು ಪಡೆದಿದ್ದರೂ ಅವು ಒಂದಕ್ಕೊಂದು ವಿರೋಧಿಯಾಗಿರಲಿಲ್ಲ. ಹಲವಾರು ಶಾಸ್ತ್ರಗಳು ಪುಷ್ಟಿಪಡೆದು ಬೆಳೆದವು. ಗಣಿತ, ಖಗೋಲ, ಜ್ಯೋತಿಷ ಶಾಸ್ತ್ರಗಳನ್ನು ಪಂಡಿತರು ಆಳವಾಗಿ ಅಭ್ಯಸಿಸಿ ಬೆಳಸಿದರು. ಆರ್ಯಭಟ್ಟನೆಂಬ ಪ್ರಖ್ಯಾತ ಜ್ಯೋತಿಷಶಾಸ್ತ್ರಜ್ಞನು ಇದೇ ಕಾಲದಲ್ಲಿ ಜೀವಿಸಿದನು. ಅವನಿಗೆ ಪೃಥ್ವಿಯ ಗೋಲಾಕಾರ, ಗುರುತ್ವಾಕರ್ಷಣ, ಪರಿಭ್ರಮಣಗಳು ತಿಳಿದ ವಿಷಯಗಳಾಗಿದ್ದವು. ವರಾಹಮಿಹಿರನು ಗ್ರೀಕ ತತ್ತ್ವಗಳನ್ನು ಬಲ್ಲವನಾಗಿದ್ದನು. ಬ್ರಹ್ಮಗುಪ್ತನೆಂಬ ಪ್ರಸಿದ್ಧ ಗಣಿತಜ್ಞನಿಗೆ ಗ್ರಹಣದ ನಿಜವಾದ ಕಾರಣಗಳು ವಿದಿತವಾಗಿದ್ದವು.

**ಸಾಹಿತ್ಯ :**—ಕವಿಕುಲಸಮ್ರಾಟನೆಂದು ಹೆಸರುಪಡೆದ ಕಾಲಿದಾಸನು 'ಶಾಕುಂತಲ' ಮುಂತಾದ ಶ್ರೇಷ್ಠ ನಾಟಕಗಳನ್ನೂ ಕಾವ್ಯಗಳನ್ನೂ[೧] ಬರೆದು ಸಂಸ್ಕೃತಸಾಹಿತ್ಯದಲ್ಲಿ ಜಗತ್ಪ್ರಸಿದ್ಧನಾದನು. ವಿಷ್ಣುಶರ್ಮನು ಸಂಸ್ಕೃತದಲ್ಲಿ ಪಂಚತಂತ್ರವೆಂಬ ಗ್ರಂಥವನ್ನು ಬರೆದನು. ಇದರಂತೆ ಅನೇಕ ಕಾವ್ಯಗಳೂ ಪುರಾಣಗಳೂ ರಚಿತವಾದವು. ಈ ರೀತಿಯಾಗಿ ಗುಪ್ತರ ಆಳಿಕೆಯಲ್ಲಿ ಸಂಸ್ಕೃತಸಾಹಿತ್ಯವು ಸರ್ವತೋಮುಖವಾಗಿ ಬೆಳೆದು ಅತಿ ಮೇಲ್ಮಟ್ಟಕ್ಕೆ ಮುಟ್ಟಿತು. ಅದು ಈ ಕಾಲದಲ್ಲಿ ರಾಜಭಾಷೆಯೂ ಆಗಿತ್ತು.

೧. 'ರಘುವಂಶ' ಮುಂತಾದವನ್ನು

**ವರ್ಣಾಶ್ರಮ ಪದ್ಧತಿ :–** ಈ ಮೊದಲೆ ಉಂಟಾಗಿದ್ದ ವರ್ಣಾಶ್ರಮ ಧರ್ಮಗಳಲ್ಲಿ ವಿಶೇಷ ಬೆಳವಣಿಗೆಯಾಯಿತು. ಧರ್ಮಗಳಲ್ಲಿ ಅತಿನಿಷ್ಠೆ (ಕರ್ಮಠತನ) ತಲೆದೋರಿತು. ಈ ಕಾಲದಲ್ಲಿ ರಚಿತವಾದ ಪುರಾಣಗಳ ಪರಿಣಾಮವಾಗಿ, ವಿಷ್ಣು, ಶಿವ ಮುಂತಾದ ಪುರಾಣೋಕ್ತ ದೇವತೆಗಳ ಆರಾಧನೆಯನ್ನು ಜನರು ಪ್ರಾರಂಭಿಸಿದರು. ಗುಡಿ-ಗೋಪುರಗಳು ಪ್ರಶಸ್ತಿ ಪಡೆದವು. ದೇವಾಲಯಗಳಲ್ಲಿ ಆಢ್ಯತೆ, ಆಡಂಬರ ಮತ್ತು ವಿಧಿನಿಷೇಧಗಳು ಹೆಚ್ಚಾಗಿ ಕಂಡು ಬಂದವು.

ಕೊನೆಯದಾಗಿ, ಗುಪ್ತರ ಆಳಿಕೆಯಲ್ಲಿ ಸಂಗೀತಕ್ಕೆ ವಿಶೇಷ ಪ್ರೋತ್ಸಾಹನೆ ಇತ್ತೆಂದು ಧಾರಾಳವಾಗಿ ಹೇಳಬಹುದು. ಇದಲ್ಲದೆ, ನರ್ತನ, ವಾದನ, ವಾಸ್ತುಶಿಲ್ಪ, ಶಿಲ್ಪಕಲೆ ಮತ್ತು ಚಿತ್ರಕಲೆಗಳಿಗೂ ಸಾಕಷ್ಟು ಉತ್ತೇಜನವಿತ್ತು. ಎಷ್ಟೋ ಸುಂದರವಾದ ದೇವಾಲಯಗಳು, ಗುಹೆಗಳು, ಸ್ತಂಭಗಳು, ಮೂರ್ತಿಗಳು ಈ ಕಾಲದಲ್ಲಿ ತಯಾರಾದವು. ಜನರ ದಿನದಿನದ ಆಹಾರವಿಹಾರ, ವೇಷಭೂಷಣ, ನಡೆನುಡಿಗಳಲ್ಲಿ ಸೊಬಗು ಕಂಡುಬರುತ್ತಿತ್ತು.

## ಅಭ್ಯಸನಗಳು.

೧. ಗುಪ್ತ ಅರಸರ ವಂಶವೃಕ್ಷವನ್ನು ತಯಾರಿಸಿರಿ. (ಈ ಪ್ರಕರಣದಲ್ಲಿ ಕೊಟ್ಟಿರುವ ಅರಸರ ಹೆಸರುಗಳನ್ನು ಕಾಲಾನುಕ್ರಮವಾಗಿ ಹೊಂದಿಸಿ ಬರೆಯಿರಿ.)

೨. ಭಾರತದ ಬಾಹ್ಯರೇಷೆಯ ಸಕಾಶದಲ್ಲಿ ಸಮುದ್ರಗುಪ್ತನ ದಿಗ್ವಿಜಯದ ಮಾರ್ಗವನ್ನು ನಿರೂಪಿಸಿರಿ.

೩. ೨ನೆಯ ಚಂದ್ರಗುಪ್ತನ (ವಿಕ್ರಮಾದಿತ್ಯನ) ಓಲಗದಲ್ಲಿಯ ನವರತ್ನಗಳ ಹೆಸರುಗಳನ್ನು ಬರೆದು ನೆನಪಿನಲ್ಲಿಡಿರಿ.

# ೧೧ನೆಯ ಪ್ರಕರಣ




ಚಿತ್ರ ೧. ಆಗ್ನೇಯ–ಏಶಿಯಾದಲ್ಲಿ ಭಾರತೀಯ ಸಂಸ್ಕೃತಿಯ ಪ್ರಸಾರ.



ಚಿತ್ರ ೨. ಯಶೋಧರಪುರ (ಕಂಬುಜ)ದಲ್ಲಿಯ ಪ್ರಸಿದ್ಧ ಶೈವದೇವಾಲಯ.

## ೧೧ನೆಯ ಪ್ರಕರಣ

## ವಿಶಾಲಭಾರತ (ಬೃಹದ್ಭಾರತ)

(ಚೀನ ಹಾಗು ಮಧ್ಯಏಶಿಯಗಳಲ್ಲಿ ಬೌದ್ಧಧರ್ಮದ ಪ್ರಸಾರ; ಆಗ್ನೇಯ ಏಶಿಯದಲ್ಲಿ ಭಾರತೀಯ ಸಂಸ್ಕೃತಿಯ ಪ್ರಸಾರ).

ಭಾರತದ ರಾಜರಲ್ಲಿ ಹೆಸರಾದ ಅಶೋಕ, ಕನಿಷ್ಕ ಸಮ್ರಾಟರು ತಮ್ಮ ಮಹತ್ಕಾರ್ಯಗಳಿಂದ ಭಾರತದ ಒಳಗೂ ಹೊರಗೂ ಸ್ವಂತ ಘನತೆಯೊಂದಿಗೆ ಭಾರತದ ಘನತೆಯನ್ನೂ ಬೆಳೆಸಿದರು. ಮುಖ್ಯವಾಗಿ, ಬೌದ್ಧಧರ್ಮಪ್ರಸಾರದಿಂದ ಅವರು ಭಾರತದ ಸಾಂಸ್ಕೃತಿಕ ಶಕ್ತಿಯು ಭರತಖಂಡದ ಹೊರನಾಡುಗಳಲ್ಲಿ ಬೆಳಗುವಂತೆ ಮಾಡಿದರು. ಆದರೆ, ಇದಕ್ಕೂ ಮೊದಲು ಎಷ್ಟೋ ಶತಮಾನಗಳ ಹಿಂದೆಯೇ[1] ಭಾರತವು ಪಾಶ್ಚಿಮಾತ್ಯ ದೇಶಗಳೊಂದಿಗೆ–ಮುಖ್ಯವಾಗಿ ಗ್ರೀಸ ಮತ್ತು ರೋಮ ದೇಶಗಳೊಂದಿಗೆ–ವ್ಯಾಪಾರ ಸಂಬಂಧವನ್ನು ಇಟ್ಟುಕೊಂಡಿತ್ತು. "ಸಂಸ್ಕೃತಿ, ಸುಧಾರಣೆಗಳು ವಾಣಿಜ್ಯ, ವ್ಯಾಪಾರಗಳನ್ನು ನಿಕಟವಾಗಿ ಹಿಂಬಾಲಿಸುತ್ತವೆ" ಎಂಬ ನಿಯಮಕ್ಕನುಸರಿಸಿ, ಆಗಿನಿಂದಲೇ ಭಾರತ ಮತ್ತು ಪಶ್ಚಿಮದೇಶಗಳಲ್ಲಿ ಪರಸ್ಪರ ಸಂಸ್ಕೃತಿಗಳ ವಿನಿಮಯವು ಪ್ರಾರಂಭವಾಯಿತೆನ್ನಬಹುದು. ಕಾಲವು ಗತಿಸಿದಂತೆ ಇದು ಹೆಚ್ಚೆಚ್ಚು ಬೆಳೆಯಿತು. ಆದರೆ ಭಾರತವು ಮಧ್ಯ ಏಶಿಯಾ ಮತ್ತು ಚೀನಗಳಲ್ಲಿ ತನ್ನ ಸಂಸ್ಕೃತಿಯನ್ನು ಪ್ರಸಾರಮಾಡಿದುದು ವಿಶೇಷವಾಗಿ ವ್ಯಾಪಾರದಿಂದಲ್ಲ. ಅಲ್ಲಿ ಧರ್ಮಪ್ರಸಾರದಿಂದ ಸಂಸ್ಕೃತಿಯ ಪ್ರಸಾರವಾಯಿತು.

### ೧. ಮಧ್ಯಏಶಿಯಾ ಮತ್ತು ಚೀನಗಳಲ್ಲಿ ಬೌದ್ಧಧರ್ಮ ಪ್ರಸಾರ:—

### ಅ. ಮಧ್ಯಏಶಿಯಾ:—

ಭಾರತವು ಮಧ್ಯಏಶಿಯಾದೊಂದಿಗೆ ವಿಶೇಷವಾಗಿ ವ್ಯಾಪಾರದ ಗೊಡವೆಗೆ ಹೋಗದೆ, ಅಲ್ಲಿ ಧರ್ಮಪ್ರಸಾರ ಮಾಡುವದರಲ್ಲಿ ತೊಡಗಿತು. ಕೆಲವುಟ್ಟಿಗೆ

೧. ಸಿಂಧೂ ನದೀತೀರದ ಸಂಸ್ಕೃತಿಯ ಸಮಯದಲ್ಲಿ

ಅಶೋಕನ ಬೌದ್ಧಧರ್ಮೋಪದೇಶಕರು ಇಲ್ಲಿಗೆ ಬಂದು ಅವರು ಮಾಡಿದ ಪ್ರಚಾರಕಾರ್ಯವು ಮತ್ತು ಕೆಲಮಟ್ಟಿಗೆ ಇಲ್ಲಿಯ ಕೆಲವು ಭಾಗದಮೇಲೆ ಕನಿಷ್ಕನ ರಾಜಕೀಯ ವರ್ಚಸ್ಸು——ಇವು ಮಧ್ಯಏಶಿಯಾದಲ್ಲಿ ಬೌದ್ಧಧರ್ಮವು ಪ್ರಸಾರವಾಗ ಲಿಕ್ಕೆ ಕಾರಣಗಳಾದವು. ಇವುಗಳ ಪರಿಣಾಮವಾಗಿ, ಈ ಧರ್ಮವು ಕಾಸ್ಪಿಯನ ಸಮುದ್ರತೀರದಿಂದ ಚೀನದ 'ದೊಡ್ಡ ಗೋಡೆ'ಯ ವರೆಗೆಹಬ್ಬಿತು. ಆ ಕಾಲದಲ್ಲಿ ಅಸಭ್ಯ ಹಾಗು ಅಲೆದಾಡುವ ಸ್ವಭಾವದ ಜನರು ಅಲ್ಲಿ ನೆಲಸಿದ್ದರು. ಬೌದ್ಧಧರ್ಮವೇ ಆ ಇಡೀ ಜನಾಂಗದ ಧರ್ಮವಾಯಿತು.[೧]

**ಬ. ಚೀನ:—**

ಮಧ್ಯಏಶಿಯಾದಿಂದ ಬೌದ್ಧಧರ್ಮವು ಚೀನಕ್ಕೆ ಹಬ್ಬಿತು. ಕ್ರಿ. ಶ. ೬೫ ರಲ್ಲಿ ಗಾಂಧಾರ[೨], ಖೋತನಗಳಿಂದ 'ಧರ್ಮರತ್ನ' ಮತ್ತು 'ಕಶ್ಯಪ ಮಾತಂಗ' ರೆಂಬ ಇಬ್ಬರು ಬೌದ್ಧ ಭಿಕ್ಷುಗಳು ಧರ್ಮಪ್ರಸಾರಕ್ಕಾಗಿ ಚೀನಕ್ಕೆ ಹೋದರು. ಮುಂದೆ ಕೆಲವು ವರುಷಗಳ ನಂತರ ಚೀನದ ಕೆಲವು ಪ್ರಾಂತಗಳು ಕನಿಷ್ಕನ ರಾಜಕೀಯ ಪ್ರಭಾವಕ್ಕೊಳಪಟ್ಟವು. ಆದ್ದರಿಂದ ಅಲ್ಲಿಯ ಬೌದ್ಧ ಧರ್ಮದ ಪ್ರಸಾರವು ತ್ವರಿತದಿಂದ ಸಾಗಿತು. ಅದು ಚೀನದಲ್ಲಿ ಈಗಲೂ ಕೋಟಿಗಟ್ಲೆ ಜನರು ಆಚರಿಸುತ್ತಿರುವ ಧರ್ಮವಾಗಿರುವದು.

ಹೊಸ ಧರ್ಮದಿಂದ ಸ್ಫೂರ್ತಿಗೊಂಡ ಚೀನವು ತನ್ನಲ್ಲಿಯ ಬೌದ್ಧ ಭಿಕ್ಷು ಗಳನ್ನು ತಂಡತಂಡವಾಗಿ ಭಾರತಕ್ಕೆ ಕಳುಹಿತು. ಬುದ್ಧನ ಜನ್ಮಭೂಮಿ ಯಾದ ಭಾರತದಲ್ಲಿ ಕೆಲವುಕಾಲ ವಾಸಿಸಿ, ಅವನ ಧರ್ಮತತ್ತ್ವಗಳನ್ನೂ ಆಚಾರವಿಚಾರಗಳನ್ನೂ ನೇರವಾಗಿ ಅಭ್ಯಸಿಸುವದು ಮತ್ತು ಬೌದ್ಧ ಧರ್ಮ ಗ್ರಂಥಗಳನ್ನು ತಮ್ಮ ಭಾಷೆಗೆ ಭಾಷಾಂತರಿಸಲು ಅವನ್ನು ತಮ್ಮ ದೇಶಕ್ಕೆ ಒಯ್ಯುವದು ಅವರ ಮುಖ್ಯ ಉದ್ದೇಶಗಳಾಗಿದ್ದವು. ಇದಕ್ಕಾಗಿ ಅವರು ಭಾರತದಲ್ಲಿ ಸಂಸ್ಕೃತ ಮತ್ತು ಪಾಲೀ ಭಾಷೆಗಳನ್ನು ಕಲಿತರು. ಮರಳಿ

---

೧. ಈ ಪ್ರದೇಶದಲ್ಲಿ ಸಂಶೋಧನೆಯ ಕಾರ್ಯ ನಡೆದಾಗ, ಬೌದ್ಧ ಮಠ, ಸ್ತೂಪ, ವಿಗ್ರಹ ಹಾಗು ಕೈಬರಹಗಳ ಅವಶೇಷಗಳು ದೊರೆತಿರುತ್ತವೆ.

೨. ಈಗಿನ ಕಂದಹಾರ

ಹೋಗುವಾಗ ಸಾವಿರಾರು ಬೌದ್ಧಗ್ರಂಥಗಳನ್ನು ಒಯ್ದರು. ಜೊತೆಗೆ, ಭಾಷಾಂತರ ಕಾರ್ಯದಲ್ಲಿ ಸಹಾಯ ಮಾಡಲಿಕ್ಕೆಂದು ಎಷ್ಟೋ ಭಾರತೀಯ ವಿದ್ವಾಂಸರನ್ನು ಕರೆದೊಯ್ದರು.[೧]

ತಿಬೇಟ:— ಇಲ್ಲಿಯೂ ಬೌದ್ಧ ಧರ್ಮಪ್ರಸಾರವು ಕೆಲಮಟ್ಟಿಗೆ ಚೀನದಲ್ಲಿಯಂತೆ ಸಾಗಿತು. ಆದರೆ ಇಲ್ಲಿ ಅದು ತುಸು ತಡವಾಗಿ– ಅಂದರೆ, ಕ್ರಿ. ಶ. ೭ನೆಯ ಶತಮಾನದಲ್ಲಿ–ಪ್ರಾರಂಭವಾಯಿತು. ಏಕೆಂದರೆ, ತಿಬೇಟವು ಬಲಾಢ್ಯ ರಾಜ್ಯವಾದುದು, ಅದೇ ಶತಮಾನದಲ್ಲಿ. ಬೌದ್ಧ ಧರ್ಮದಲ್ಲಿ ಆಸಕ್ತಿಯನ್ನು ತಾಳಿದ ಸ್ಟ್ರಾಂಗ–ತ್ಸಾನ ಗಾಂಪೊ[೨] ಎಂಬ ಪ್ರಸಿದ್ಧ ಅರಸನು ಚೀನದಲ್ಲಿ ಆಗಿಹೋದುದು ಅದೇ ಶತಮಾನದಲ್ಲಿ. ಅವನು ಚೀನದ ಒಬ್ಬ ರಾಜಕುಮಾರಿಯನ್ನೂ ನೇಪಾಳದ ಒಬ್ಬ ರಾಜಕುಮಾರಿಯನ್ನೂ ಮದುವೆಯಾಗಿದ್ದನು. ತಿಬೇಟದಲ್ಲಿ ಬೌದ್ಧಧರ್ಮವು ಉಂಟಾಗಲಿಕ್ಕೆ ಪ್ರಾಯಶಃ ಇವರೇ ಕಾರಣವಾಗಿರಬಹುದು. ಹೊಸ ಧರ್ಮದೊಂದಿಗೆ ಭಾರತದ ವರ್ಣಮಾಲೆಗಳೂ ಅಲ್ಲಿ ಬಳಕೆಯಲ್ಲಿ ಬಂದವು.

ತಿಬೇಟದ ಭಿಕ್ಷುಗಳೂ, ಚೀನದ ಭಿಕ್ಷುಗಳಂತೆ, ಭಾರತಕ್ಕೆ ಬಂದರು. ಅವರು ಇಲ್ಲಿಯ 'ನಾಲಂದ' ಮತ್ತು 'ವಿಕ್ರಮಶಿಲೆ'[೩] ವಿದ್ಯಾಪೀಠಗಳಲ್ಲಿ ಅಧ್ಯಯನ ಮುಗಿಸಿ ಮರಳಿಹೋಗುವ ಮುಂದೆ ಬೌದ್ಧಗ್ರಂಥಗಳನ್ನೊಯ್ದರು. ನೂರಾರು ಗ್ರಂಥಗಳು ತಿಬೇಟದ ಭಾಷೆಗೆ ಭಾಷಾಂತರವಾದವು.

೧. ಇಲ್ಲಿಗೆ ಬಂದ ಚೀನ-ವಿದ್ವಾಂಸರಲ್ಲಿ ಫಾಹಿಯೆನ, ಹುಯೆನ–ತ್ಸಂಗ, ಇ–ತ್ಸಿಂಗ ಇವರು ಮುಖ್ಯರು. ಇವರಲ್ಲದೆ ಮತ್ತೂ ಎಷ್ಟೋ ವಿದ್ವಾಂಸರು ಬಂದು ಹೋದರು. ಚೀನದಲ್ಲಿ ಧರ್ಮಪ್ರಸಾರಕ್ಕಾಗಿ, ಕುಮಾರಜೀವ, ಗುಣಧರ್ಮ, ಶುಭಕರಸಿಂಹ, ಧರ್ಮದೇವರೆಂಬ ಭಾರತೀಯ ಬೌದ್ಧರು ಅಲ್ಲಿಗೆ ಹೋದರು. ಇವರು ಗ್ರಂಥಗಳನ್ನು ಭಾಷಾಂತರಿಸುವದರಲ್ಲಿ ನೆರವಾದರು.

೨. Strong Tsan Gampo

೩. ಇವು ಆಗಿನ ಕಾಲದ ಪ್ರಸಿದ್ಧ ವಿದ್ಯಾಕೇಂದ್ರಗಳು

ಎಷ್ಟೋ ಭಾರತೀಯ ಬೌದ್ಧರು ಧರ್ಮಪ್ರಸಾರಕ್ಕೂ ಭಾಷಾಂತರಕಾರ್ಯದಲ್ಲಿ ನೆರವಾಗಲಿಕ್ಕೂ ತಿಬೇಟಕ್ಕೆ ಹೋದರು.[೧]

**೨. ಆಗ್ನೇಯ ಏಶಿಯಾದಲ್ಲಿ ಭಾರತೀಯ ಸಂಸ್ಕೃತಿಯ ಪ್ರಸಾರ:– (ಚಿತ್ರ ೧ ನೋಡಿರಿ).**

ಭಾರತದ ಪೂರ್ವಕ್ಕೆ ಮತ್ತು ಚೀನದ ದಕ್ಷಿಣಕ್ಕೆ ಹಿಂದ-ಚೀನ (ಇಂಡೋಚೀನ) ಎಂಬ ದ್ವೀಪಕಲ್ಪವೂ ಮಲಯ ನಡುಗಡ್ಡೆಗಳೂ ಪಸರಿಸಿವೆ. ಇವು ಆಗ್ನೇಯ ಏಶಿಯಾದಲ್ಲಿ ಸಮಾವೇಶವಾಗಿರುವವು. ಈ ಪ್ರದೇಶದ ಭೂಮಿಯು ಪ್ರಾಚೀನಕಾಲದಿಂದಲೂ ಫಲವತ್ತಾದುದು. ಇಲ್ಲಿ ಖನಿಜ ಸಂಪತ್ತು ಹೇರಳವಾಗಿತ್ತು. ಇಡೀ ಜಗತ್ತಿಗೆ ಮಸಾಲೆ ಸಾಮಾನುಗಳನ್ನು ಒದಗಿಸುವ ಶಕ್ತಿಸಂಪನ್ನವಾದ ಭೂಮಿಯು ಇಲ್ಲಿ ಇದ್ದಿತು. ಆದ್ದರಿಂದ ಈ ಪ್ರದೇಶಗಳು ಆಗಿನ ಕಾಲದಲ್ಲಿಯೇ ಭಾರತೀಯರ ಲಕ್ಷ್ಯವನ್ನು ಸೆಳೆದಿದ್ದವೆಂದು ಹೇಳಲಾಗುತ್ತದೆ. ರಾಮಾಯಣ–ಮಹಾಭಾರತಗಳ ಕಾಲದ ನಂತರ, ಭಾರತದ ಸಮುದ್ರವ್ಯಾಪಾರಿಗಳು ಆಗ್ನೇಯಏಶಿಯಾದ ಭಾಗಗಳಿಗೆ ಹೋಗತೊಡಗಿದರೆಂದು ನಂಬಲಾಗಿದೆ. ಇಲ್ಲಿ ಅವರಿಗೆ ಚಿನ್ನದ ಕಣಿಗಳು ಕಂಡುಬಂದವು. ಇದಕ್ಕಾಗಿ ಅವರು ಆ ಪ್ರದೇಶವನ್ನು ಸುವರ್ಣ ಭೂಮಿಯೆಂದು ಕರೆದರು. ಕನಿಷ್ಕನ ಕಾಲದಲ್ಲಿ, ಭಾರತೀಯರು ಆ ಪ್ರದೇಶದ ಜಾವಾ, ಬೋರ್ನಿಯೊ, ಬಾಲಿ ಮುಂತಾದ ನಡುಗಡ್ಡೆಗಳಿಗೆ ಹೋಗಿ ನೆಲಸಿದರು. ಹೀಗಾಗಿ ಅಲ್ಲಿ ಭಾರತೀಯ ವಸಾಹತುಗಳುಂಟಾದವು. ಬಳಿಕ ಅಲ್ಲಿ ಭಾರತೀಯ ರಾಜ್ಯಗಳು ಸ್ಥಾಪಿತವಾದವು. ಭಾರತದಲ್ಲಿ ಪಿತ್ರಾರ್ಜಿತ

---

೧. ತಿಬೇಟಕ್ಕೆ ನಾಲಂದ ವಿಶ್ವವಿದ್ಯಾಲಯದಿಂದ ಹೋದವರಲ್ಲಿ ಶಾಂತರಕ್ಷಿತ, ಪದ್ಮಸಂಭವ, ಕಮಲಶೀಲ, ಸ್ಥಿರಮತಿ, ಬುದ್ಧಿಕೀರ್ತಿ, ಇವರು ಮುಖ್ಯರು. ಆರ್ಯದೇವ, ಶೀಲಭದ್ರ, ಧರ್ಮಪಾಲ ಇವರು ಸಂಸ್ಕೃತಭಾಷೆಯಲ್ಲಿಯ ಬೌದ್ಧ ಧರ್ಮಗ್ರಂಥಗಳನ್ನು ತಿಬೇಟೀ ಭಾಷೆಗೆ ಭಾಷಾಂತರಿಸಿದರು. ವಿಕ್ರಮಶಿಲೆಯಿಂದ ತಿಬೇಟಕ್ಕೆ ಹೋದವರಲ್ಲಿ "ದೀಪಂಕರ" (ಅತಿಶ) ನೆಂಬವನು ಅತಿ ಪ್ರಸಿದ್ಧನು. ಅತಿಶನನ್ನು ತಿಬೇಟದ ಅರಸನೂ ಜನರೂ ಅಭೂತಪೂರ್ವವಾಗಿ ಸತ್ಕರಿಸಿದರು.

ರಾಜ್ಯವನ್ನು ಕಳೆದುಕೊಂಡ ಕ್ಷತ್ರಿಯರನೇಕರು ಅಲ್ಲಿಗೆ ಹೋಗಿ ನೆಲಸಿದ ರೆಂದೂ ಅವರಿಂದಲೆ ಈ ರಾಜ್ಯಗಳು ಸ್ಥಾಪಿತವಾದವೆಂದೂ ಹೇಳಲಾಗುತ್ತದೆ. ಹೀಗಿದ್ದರೆ, ಆಗ್ನೇಯ-ಏಶಿಯಾದಲ್ಲಿ ಭಾರತೀಯ ಸಂಸ್ಕೃತಿಯ ಪ್ರಸಾರಕ್ಕೆ ರಾಜಕೀಯಸತ್ತೆಯೆ ತಳಹದಿಯಾಯಿತೆಂದು .ಧಾರಾಳವಾಗಿ ಹೇಳಬಹುದು. ಕ್ರಿ. ಶ. ೫ನೆಯ ಶತಮಾನದ ವರೆಗೆ, ಮಲಯದ್ವೀಪಕಲ್ಪ, ಕಂಬುಜ (ಕಾಂಬೋಡಿಯ), ಚಂಪಾ (ಅನ್ನಾಮು) ಗಳಲ್ಲಿ ಮತ್ತು ಜಾವಾ, ಸುಮಾತ್ರಾ, ಬೋರ್ನಿಯೋ ಹಾಗು ಬಾಲಿ ಇವುಗಳಲ್ಲಿ ಭಾರತೀಯ ರಾಜ್ಯಗಳು ಉದಯಿಸಿದವು.

ಮೇಲೆ ಹೇಳಿದ ಈ ಪ್ರದೇಶಗಳಲ್ಲಿ ವೈದಿಕ ಧರ್ಮವು—ಹೆಚ್ಚಾಗಿ ಶೈವ ಪಂಥವು—ಊರ್ಜಿತಗೊಂಡಿತು. ಬೌದ್ಧ ಧರ್ಮವಾದರೂ ಮೊದಮೊದಲು ತುಸುಮಟ್ಟಿಗೆ ಗೊತ್ತಿತ್ತು. ಸ್ಥಳಿಕ ಜನರು ತಮ್ಮ ಆಳರಸರ ಸಂಸ್ಕೃತಿಯನ್ನು ಅನುಸರಿಸಿದರು. ಇಲ್ಲಿಗೆ ಆಳರಸರು ಬಂದನಂತರ ಭಾರತೀಯಸಂಸ್ಕೃತಿಯಲ್ಲಿ ತುಸುಮಟ್ಟಿಗೆ ಮಾರ್ಪಾಟಾದುದು ನಿಜ. ಒಟ್ಟಾರೆ, ಸ್ಥಳಿಕರ ಮತ್ತು ಆಗಂತುಕರ ಸಂಸ್ಕೃತಿಗಳೆರಡೂ ಬೆರೆತು ಸಮರಸವಾಗಿ ಅವುಗಳಲ್ಲಿ ಏಕರೂಪತೆ ಉಂಟಾಯಿತು. ಆದರೂ ಬಹುಕಾಲದವರೆಗೆ[೧] ಇಲ್ಲಿಯ ಸಮಾಜದಲ್ಲಿ ಭಾರತೀಯ ಸಂಸ್ಕೃತಿಯೆ ಎದ್ದುಕಾಣಿಸುತ್ತಿತ್ತು. ಇಲ್ಲಿಯ ಕೆಲವು ರಾಜ್ಯಗಳು ಬಹುಕಾಲ ಊರ್ಜಿತಾವಸ್ಥೆಯಲ್ಲಿದ್ದವು. ಭಾರತದಲ್ಲಿ ಭಾರತೀಯರ ಸತ್ತೆಯು ಅಳಿದುಹೋದನಂತರವೂ ಈ ಪ್ರದೇಶಗಳಲ್ಲಿ ಅದು ಕುಗ್ಗಿರಲಿಲ್ಲ.

ಇಂಡೋ-ಚೀನದಲ್ಲಿ ಎರಡು ಬಲಾಢ್ಯ ಭಾರತೀಯ ರಾಜ್ಯಗಳಾಗಿ ಹೋದವು. ಅವು ಯಾವವೆಂದರೆ, (೧) ಚಂಪಾ (೨) ಕಂಬುಜ.

**ಚಂಪಾ :—** ಅತ್ಯಂತ ವಿಸ್ತಾರ ಹೊಂದಿದಾಗ ಈ ರಾಜ್ಯವು ಈಗಿನ ಅನ್ನಾಮು ಎಂಬ ಇಡೀ ಪ್ರದೇಶವನ್ನು ಒಳಗೊಂಡಿತ್ತು. ಕ್ರಿ. ಶ. ೨ನೆಯ ಶತಮಾನದಲ್ಲಿ ಇದು ಸ್ಥಾಪಿತವಾಗಿ ಸುಮಾರು ೧೩೦೦ ವರುಷಗಳ ವರೆಗೆ[೨] ಕೀರ್ತಿಶಾಲಿಯಾಗಿತ್ತು. ಇದರಲ್ಲಿ ಎಷ್ಟೋ ಪ್ರಸಿದ್ಧ ಪಟ್ಟಣಗಳೂ ರಾಜ್ಯದ

೧. ಸುಮಾರು ೧೦೦೦ ವರುಷಗಳಿಗೆ ಮೇಲ್ಪಟ್ಟು

೨. ಕ್ರಿ. ಶ. ೧೪೭೧ರ ವರೆಗೆ

ತುಂಬೆಲ್ಲ ಸುಂದರವಾದ ಹಿಂದು ಮತ್ತು ಬೌದ್ಧ ದೇವಾಲಯಗಳೂ ಕಂಗೊಳಿಸುತ್ತಿದ್ದವು. ಮುಂದೆ, ಮೇಲಿಂದಮೇಲೆ ಪರದಾಳಿಗಳಾದ್ದರಿಂದ ಈ ರಾಜ್ಯವು ಮಾಯವಾಯಿತು.

**ಕಂಬುಜ:**—ಈ ರಾಜ್ಯವಾದರೂ ಕ್ರಿ.ಶ. ಒಂದನೆಯ ಇಲ್ಲವೆ ಎರಡನೆಯ ಶತಮಾನದಲ್ಲಿ ಸ್ಥಾಪಿತವಾಯಿತು.[೧] ಚೀನರು ಇದನ್ನು ಫು–ನಾನ ಎಂದು ಕರೆದರು. ಒಬ್ಬ ಚೀನ ಗ್ರಂಥಕಾರನು ಇದರ ಬಗೆಗೆ ಹೀಗೆ ಹೇಳಿರುವನು:— "ಭಾರತದ ಸಾವಿರಾರು ಬ್ರಾಹ್ಮಣರು ಇಲ್ಲಿ ನೆಲಸಿರುವರು. ಸ್ಥಳಿಕಜನರು ಇವರ ತತ್ತ್ವಗಳನ್ನು ಅನುಸರಿಸಿ, ಹಗಲೂ ರಾತ್ರಿ ಅವರ ಧರ್ಮಗ್ರಂಥಗಳ ಅಧ್ಯಯನವನ್ನು ಮಾಡುವರು. ತಮ್ಮ ಹೆಣ್ಣುಮಕ್ಕಳನ್ನು ಇವರಿಗೆ ವಿವಾಹ ಮಾಡಿಕೊಟ್ಟು ಇವರೊಂದಿಗೆ ಶರೀರಸಂಬಂಧ ಬೆಳಸುವರು." ಫು–ನಾನದ ರಾಜರು ಭಾರತಕ್ಕೂ ಚೀನಕ್ಕೂ ರಾಯಭಾರಿಗಳನ್ನು ಕಳಿಸುತ್ತಿದ್ದರು. ಕ್ರಿ. ಶ. ೬ನೆಯ ಶತಮಾನದಿಂದಲೂ ಇಲ್ಲಿಯ ರಾಜರು ಸುಮಾರು ೯೦೦ ವರುಷಗಳವರೆಗೆ ಅತ್ಯಂತ ವೈಭವದಿಂದ ರಾಜ್ಯಭಾರ ಮಾಡಿದರು. ಪರದಾಳಿಗಳ ಮೂಲಕ ಈ ರಾಜ್ಯವು ೧೫ನೆಯ ಶತಮಾನದಲ್ಲಿ ಕೊನೆಗಂಡಿತು. ಇದು ವೈಭವಶಿಖರವನ್ನು ಮುಟ್ಟಿದಾಗ ಈಗಿನ ಕಾಂಬೋಡಿಯ, ಕೋಚಿನ–ಚೀನ, ಸಯಾಮ, ಬ್ರಹ್ಮದೇಶ ಮತ್ತು ಮಲಯ ದ್ವೀಪಕಲ್ಪದ ಕೆಲವು ಭಾಗಗಳು—ಇವು ಈರಾಜ್ಯದಲ್ಲಿ ಸಮಾವೇಶವಾಗಿದ್ದವು. ಯಶೋಧರಪುರವೆಂಬ ಇದರ ರಾಜಧಾನಿಯೂ ಮತ್ತು ಅದರಲ್ಲಿಯ ಶೈವ ದೇವಾಲಯವೂ ಆಗಿನ ಕಾಲದ ಜಗತ್ತಿನಲ್ಲಿ ಅತ್ಯಂತ ಸುಪ್ರಸಿದ್ಧವಿದ್ದವು (ಚಿತ್ರ ೨ ನೋಡಿರಿ).

**ಸಾರಾಂಶ:** — ಎಷ್ಟೋ ಭಾರತೀಯರು ಆಗ್ನೇಯ–ಏಶಿಯಾದ ಪ್ರದೇಶಗಳಿಗೆ ಹೋಗಿ ಅಲ್ಲಿಯೆ ಒಕ್ಕಲಾಗಿ ನಿಂತು ರಾಜ್ಯಗಳನ್ನು ಸ್ಥಾಪಿಸಿದರು. ಕೆಲವು ದೊಡ್ಡ ರಾಜ್ಯಗಳು ಬಹುಕಾಲ ವೈಭವದಿಂದ ಮೆರೆದವು. ಅರಸರು ಅಲ್ಲಿಯ ಮೂಲನಿವಾಸಿಗಳ ಮೇಲೆ ತಮ್ಮ (ಭಾರತೀಯ) ಸಂಸ್ಕೃತಿಯ ಪ್ರಭಾವವನ್ನು ಬೀರಿದರು. ಇದರ ಪರಿಣಾಮವಾಗಿ, ಭಾರತೀಯ

೧. ಇದನ್ನು ಕೌಂಡಿಣ್ಯನೆಂಬ ಬ್ರಾಹ್ಮಣನು ಸ್ಥಾಪಿಸಿದನೆಂದು ಹೇಳಲಾಗುತ್ತದೆ.

ಧರ್ಮ, ಭಾರತೀಯ ಸಂಸ್ಕೃತಿ, ಭಾರತೀಯ ಶಾಸನಪದ್ಧತಿಗಳು ಆ ಪ್ರದೇಶಗಳಲ್ಲಿ ತಳವೂರಿ ಅಲ್ಲಿಯ ಜನಜೀವನವನ್ನು ರೂಪುಗೊಳಿಸಿದವು. ಇದರಿಂದಲೆ, ಕ್ರಿ. ಶ. ಪ್ರಾರಂಭದಿಂದ ಸುಮಾರು ೧೫೦೦ ವರುಷಗಳ ವರೆಗೆ ಭಾರತವು ಭರತಖಂಡದ ಆಚೆಗೆ ವಿಸ್ತಾರಹೊಂದಿ, ವಿಶಾಲಭಾರತ (ಬೃಹದ್ಭಾರತ) ವೆಂದು ಆ ಕಾಲದ ಜಗತ್ತಿನಲ್ಲಿ ಪ್ರಸಿದ್ಧಿಪಡೆಯಿತು.

## ಅಭ್ಯಸನಗಳು.

೧. **ಕಾಲ್ಪನಿಕ ಸಂಭಾಷಣೆ :**–ಚೀನ ರಾಜ್ಯದಲ್ಲಿ ಬೌದ್ಧಧರ್ಮವನ್ನು ಪ್ರಾರಂಭಿಸಲಿಕ್ಕೆ, ತಿಬೇಟದ ಅರಸನನ್ನು ಅವನ ರಾಣಿಯು (ಚೀನದ ರಾಜಪುತ್ರಿ) ಮನವೊಲಿಸಿದ ಬಗೆಗೆ ಕಾಲ್ಪನಿಕ ಸಂಭಾಷಣೆಯನ್ನು ನಡೆಸಿರಿ.

೨. **ಕಾಲ್ಪನಿಕ ಪತ್ರಲೇಖನ :**—(ನೀವು) ಆಗ್ನೇಯ–ಏಶಿಯಾದಲ್ಲಿ 'ಕಂಬುಜ' ರಾಜ್ಯದ ಒಬ್ಬ ಬಾಲಕ (ಇಲ್ಲವೆ, ಬಾಲಿಕೆ) ಎಂದು ಭಾವಿಸಿ ಭಾರತದಲ್ಲಿಯ ನಿಮ್ಮ ಗೆಳೆಯ(ಇಲ್ಲವೆ ಗೆಳತಿ)ಗೆ ಒಂದು ಚಿಕ್ಕ ಪತ್ರವನ್ನು ಬರೆಯಿರಿ.

# ೧೨ನೆಯ ಪ್ರಕರಣ




ಚಿತ್ರ ೧. ಪ್ರಾಚೀನ ಭಾರತದಲ್ಲಿ ಹೆಸರಾದ ಕೆಲವು ವಿದ್ಯಾಕೇಂದ್ರಗಳು







ಚಿತ್ರ ೨. ನಾಲಂದಾ ವಿಶ್ವವಿದ್ಯಾಲಯದಲ್ಲಿ ವೇಳಾಸೂಚಕ ಸಾಧನಗಳು.



# ೧೨ನೆಯ ಪ್ರಕರಣ

---

## ಹುಯೆನ–ತ್ಸಂಗನ ಪ್ರವಾಸಗಳು; ತಕ್ಷಶಿಲಾ, ನಾಲಂದಾ ವಿಕ್ರಮಶಿಲಾ ವಿಶ್ವವಿದ್ಯಾಲಯಗಳು

### ೧. ಹುಯೆನ–ತ್ಸಂಗನ ಪ್ರವಾಸಗಳು :—

ಹುಯೆನ–ತ್ಸಂಗನು ೭ನೆಯ ಶತಮಾನದಲ್ಲಿ ಚೀನದಿಂದ ಭಾರತಕ್ಕೆ ಬಂದುಹೋದ ಒಬ್ಬ ಬೌದ್ಧ ಯಾತ್ರಿಕನು. ಇವನು ಪಶ್ಚಿಮಚೀನದಲ್ಲಿ ನೆಲಸಿದ್ದ ಒಬ್ಬ ವಿದ್ವಾಂಸನ ಮಗ. ಇವನು ಕ್ರಿ. ಶ. ೬೦೦ರಲ್ಲಿ ಜನಿಸಿದನು. ಚಿಕ್ಕಂದಿನಿಂದಲೂ ಇವನಿಗೆ ಧರ್ಮದಲ್ಲಿ ವಿಶೇಷ ಆಸಕ್ತಿ ಇದ್ದಿತು. ತನ್ನ ವಯಸ್ಸಿನ ೨೯ನೆಯ ವರುಷದಲ್ಲಿ ಭಾರತವನ್ನು ಸಂದರ್ಶಿಸಲು ಪ್ರವಾಸವನ್ನು ಕೈಕೊಳ್ಳುವಾಗಲೇ ಇವನು ಚೀನದಲ್ಲಿ ಬೌದ್ಧಭಿಕ್ಷುವೆಂದು ಪ್ರಸಿದ್ಧಿ ಪಡೆದಿದ್ದನು. ಇವನು ಪ್ರವಾಸದಲ್ಲಿ ಒಟ್ಟು ೧೬ ವರುಷ ಕಳೆದನು.

**ಪ್ರವಾಸದ ಉದ್ದೇಶಗಳು:—** ಭಾರತದಲ್ಲಿ ನಿಂತು ಬೌದ್ಧ ಧರ್ಮದ ಅಭ್ಯಾಸ, ಬೌದ್ಧರ ಪವಿತ್ರ ಕ್ಷೇತ್ರಗಳ ಸಂದರ್ಶನ ಮತ್ತು ಬೌದ್ಧಧರ್ಮದ ಮೂಲಗ್ರಂಥಗಳ ಸಂಗ್ರಹ–ಇವು ಹುಯೆನ–ತ್ಸಂಗನ ಮುಖ್ಯ ಉದ್ದೇಶಗಳಾಗಿದ್ದವು.

**ಪ್ರವಾಸ:—** ಇವನು ಸ್ವಸ್ಥಾನದಿಂದ ಹೊರಟು ಮಧ್ಯಏಶಿಯಾದ ಮರುಭೂಮಿಯನ್ನು ದಾಟಿ, ತಾಸ್ಕಂದ, ಸಮರ್ಕಂದ, ಬಾಲ್ಕಗಳ ಮಾರ್ಗವಾಗಿ ಹಿಂದುಕುಶ ಪರ್ವತವನ್ನು ದಾಟಿ ಕಾಬೂಲದ ಸಮೀಪಕ್ಕೆ ಬಂದನು. ಬಳಿಕ ಗಾಂಧಾರದೇಶದಿಂದ ಕಾಶ್ಮೀರವನ್ನು ಸೇರಿದನು.[2] ಭಾರತದಲ್ಲಿ ೧೩–೧೪ ವರುಷ ಕಾಲಕಳೆದು ಕ್ರಿ. ಶ. ೬೪೫ರಲ್ಲಿ ಸ್ವದೇಶಕ್ಕೆ ಮರಳಿ ಹೋದನು. ಈ ಸಮಯದಲ್ಲಿ ಉತ್ತರಭಾರತದಲ್ಲಿ ನರ್ಮದಾನದಿಯ

---

೧. ಕ್ರಿ. ಶ. ೬೨೯ ರಿಂದ ೬೪೫ ರ ವರೆಗೆ.

೨. ಕ್ರಿ. ಶ. ೬೩೧–೬೩೨ರಲ್ಲಿ.

ದಂಡೆಯುವರೆಗೆ ಹರ್ಷನೆಂಬ ಚಕ್ರವರ್ತಿಯೂ ನರ್ಮದೆಯ ದಕ್ಷಿಣಕ್ಕೆ ಚಾಲುಕ್ಯವಂಶದ ೨ನೆಯ ಪುಲಿಕೇಶಿಯೂ ರಾಜ್ಯಭಾರ ಮಾಡುತ್ತಿದ್ದರು. ಹುಯೆನ-ತ್ಸಂಗನು ಭಾರತದ ಬಹುತರ ಎಲ್ಲ ಭಾಗಗಳಲ್ಲಿ-ದಕ್ಷಿಣದಲ್ಲಿ ಪುಲಿಕೇಶಿಯ ರಾಜಧಾನಿಯುವರೆಗೆ೧—ಸಂಚರಿಸಿ ಅಲ್ಲಿಯ ವಿದ್ಯಾಕೇಂದ್ರ ವಿಹಾರ ಮೊದಲಾದವುಗಳಿಗೆ ಭೆಟ್ಟಿಕೊಟ್ಟನು.೨ ಕಾಶ್ಮೀರ, ಕನೋಜ, ನಾಲಂದಾ ಮುಂತಾದ ಸ್ಥಳಗಳಲ್ಲಿ ಬೌದ್ಧ ಧರ್ಮದ ಅಭ್ಯಾಸಕ್ಕಾಗಿ ನಿಂತನು. ಮುಖ್ಯವಾಗಿ ಪ್ರಯಾಗ, ಕಾಶಿ, ಉಜ್ಜಯಿನಿ ಮುಂತಾದವುಗಳಲ್ಲಿ ವೈದಿಕಧರ್ಮದ ಕೇಂದ್ರಗಳನ್ನು ಕಂಡನು. ಗಾಂಧಾರ, ತಕ್ಷಶಿಲೆ, ಕಪಿಲವಸ್ತು, ವೈಶಾಲಿ ಮುಂತಾದವುಗಳಲ್ಲಿ ಬೌದ್ಧಧರ್ಮವು ಕ್ಷೀಣದೆಶೆಯಲ್ಲಿ ಇದ್ದಿತೆಂದೂ ಕಾಶ್ಮೀರ, ಕನೋಜ, ಮಗಧ, ವಲಭೀ ಮುಂತಾದವುಗಳಲ್ಲಿ ಅದು ಊರ್ಜಿತಾವಸ್ಥೆಯಲ್ಲಿ ಇದ್ದಿತೆಂದೂ ಅವನು ಬರೆದಿಟ್ಟಿರುವನು. ಚೀನಕ್ಕೆ ಮರಳಿ ಹೋಗುವಾಗ ಅವನು ಇಲ್ಲಿ ಸಂಗ್ರಹಿಸಿದ ವಸ್ತುಗಳನ್ನು ೨೦ ಕುದುರೆಗಳ ಮೇಲೆ ಸಾಗಿಸಿದನಂತೆ! ಅವನು ಇಲ್ಲಿಂದ ಸಂಗ್ರಹಿಸಿ ಒಯ್ದ ವಸ್ತುಗಳಲ್ಲಿ ಬುದ್ಧನ ಹಾಗೂ ಅವನ ಶಿಷ್ಯರ ಪ್ರತಿಮೆಗಳು, ಬುದ್ಧನ ಅವಶೇಷಗಳು, ಚಿತ್ರಗಳು ಮತ್ತು ಬೌದ್ಧ ಧರ್ಮದ ಗ್ರಂಥಗಳು ಮುಖ್ಯವಾದವುಗಳು. ತನ್ನ ಯಾತ್ರೆಯ ವಿವರಗಳನ್ನು ಒಟ್ಟುಗೂಡಿಸಿ ಬರೆಯುವದರಲ್ಲಿ ಹುಯೆನ-ತ್ಸಂಗನು ತನ್ನ ಉಳಿದ ದಿನಗಳನ್ನು ಕಳೆದನು. ಇದರ ಸಲುವಾಗಿ ಅವನಿಗೆ ಚೀನದ ಅರಸನಿಂದ ತಜ್ಞರ ಸಹಾಯವು ದೊರೆಯಿತು. ಅವನ ಅಗಾಧ ಪಾಂಡಿತ್ಯಕ್ಕಾಗಿ ಚೀನದಲ್ಲಿ ಅವನಿಗೆ 'ಧರ್ಮಶಾಸ್ತ್ರ ಪಂಡಿತ' ನೆಂಬ ಗೌರವದ ಬಿರುದು ದೊರೆಯಿತು.

ಹುಯೆನ-ತ್ಸಂಗನು ಹರ್ಷಚಕ್ರವರ್ತಿಯ ಶೀಲ-ಸ್ವಭಾವಗಳನ್ನೂ ಅವನ ಶಾಸನ ಪದ್ಧತಿಯನ್ನೂ ಮನವಾರೆ ಹೊಗಳಿರುವನು.೩ ಪುಲಿಕೇಶಿಯ

---

೧. ಇವನು ಅದಕ್ಕೂ ದಕ್ಷಿಣಕ್ಕೆ ಕಂಚಿಯ ವರೆಗೂ ಹೋಗಿದ್ದನೆಂದು ಕೆಲವರ ಹೇಳಿಕೆ.

೨. ಹುಯೆನ-ತ್ಸಂಗನು ಸುಮಾರು ೫೦೦೦ ಬೌದ್ಧ ವಿಹಾರಗಳಿಗೆ ಮತ್ತು ೨ ಲಕ್ಷ [ ೨,೧೨,೩೩೦ ] ಬೌದ್ಧ ಭಿಕ್ಷುಗಳಿಗೆ ಭೆಟ್ಟಿಕೊಟ್ಟನೆಂದು ಹೇಳಲಾಗುತ್ತದೆ.

೩. ಇವನು ೭-೮ ವರುಷ ಹರ್ಷನ ರಾಜ್ಯದಲ್ಲಿಯೇ ಸಂಚಾರಮಾಡಿದನು. ರಾಜಧಾನಿಯಾದ ಕನೋಜದಲ್ಲಿ ಕೆಲವು ಕಾಲ ಕಳೆದನು. ಅಲ್ಲಿಯ ಸಭೆ, ಉತ್ಸವಾದಿಗಳನ್ನು ಪ್ರತ್ಯಕ್ಷವಾಗಿ ಕಂಡನು. ಹರ್ಷನು ಇವನನ್ನು ವಿಶೇಷವಾಗಿ ಗೌರವಿಸಿದನು.

ರಾಜ್ಯಭಾರದ ವಿವರಗಳನ್ನೂ ಇವನ ಗ್ರಂಥಗಳಲ್ಲಿ ಕಾಣಬಹುದು. ಇವನಿಂದ ಮತ್ತೂ ತಿಳಿದುಬರುವದೇನೆಂದರೆ, ೭ನೆಯ ಶತಮಾನದಲ್ಲಿ ಭಾರತ ದಲ್ಲಿ ಬೌದ್ಧಧರ್ಮದ ಅವನತಿಯು ಕಣ್ಣಿಗೆ ಬೀಳುತ್ತಿದ್ದರೂ ಬೌದ್ಧರ ಸಂಖ್ಯೆಯು ತುಸು ದೊಡ್ಡ ಪ್ರಮಾಣದಲ್ಲಿತ್ತು. ಬೌದ್ಧರಲ್ಲಿ ಬೇರೆ ಬೇರೆ ಹದಿನೆಂಟು ಶಾಖೆಗಳುಂಟಾಗಿ ಅವರಲ್ಲಿ ಮೇಲಿಂದ ಮೇಲೆ ವಾದವಿವಾದಗಳು ನಡೆ ಯುತ್ತಿದ್ದವು. ಬೌದ್ಧ ಧರ್ಮವು ಕ್ಷೀಣವಾಗುತ್ತ ಸಾಗಿದಂತೆ, ವೈದಿಕಧರ್ಮ, ವೈದಿಕಶಿಕ್ಷಣ ಮತ್ತು ಸಂಸ್ಕೃತ ಭಾಷೆಗಳು ಊರ್ಜಿತಗೊಳ್ಳುತ್ತಿದ್ದವು. ಎಷ್ಟೋ ಬೌದ್ಧ ವಿದ್ಯಾಕೇಂದ್ರಗಳಲ್ಲಿ ವೈದಿಕಧರ್ಮದ ಶಿಕ್ಷಣವು ದೊರೆಯು ತ್ತಿತ್ತು. ಬೌದ್ಧಧರ್ಮ-ಕೇಂದ್ರಗಳಲ್ಲಿ ಹಿಂದು ದೇವಾಲಯಗಳು ವಿಪುಲವಾಗಿ ಕಣ್ಣಿಗೆ ಬೀಳುತ್ತಿದ್ದವು. ಜನತೆಯಲ್ಲಿ ಹಿಂದು ಮತ್ತು ಬೌದ್ಧರು ಪರಸ್ಪರ ದ್ವೇಷಾಸೂಯೆಗಳಿಲ್ಲದೆ ನೆರೆಹೊರೆಯವರಾಗಿ ಸುಖದಿಂದ ಕಾಲ ಕಳೆಯು ತ್ತಿದ್ದರು. ಕೊನೆಯದಾಗಿ, ಭಾರತದ ಆಗಿನ ಜನಜೀವನದ ವಿವರಗಳು, ನಾಲಂದಾ ವಿಶ್ವವಿದ್ಯಾಲಯದ ವಿವರಗಳು ಮತ್ತು ಇತರ ಎಷ್ಟೋ ಸಂಗತಿ ಗಳು ಹುಯೆನ-ತ್ಸಂಗನ ಗ್ರಂಥಗಳಿಂದ ತಿಳಿದುಬರುವವು.

### ೨. ತಕ್ಷಶಿಲಾ, ನಾಲಂದಾ, ವಿಕ್ರಮಶಿಲಾ ವಿಶ್ವ-ವಿದ್ಯಾಲಯಗಳು:—

ಪ್ರಾಚೀನ ಭಾರತದಲ್ಲಿ ಹೆಸರಾದ ಎಷ್ಟೋ ವಿದ್ಯಾ-ಕೇಂದ್ರಗಳಿದ್ದವು (ಚಿತ್ರ ೧ ನೋಡಿರಿ). ಅವುಗಳಲ್ಲಿ ಕೆಲವು ವೈದಿಕ ಶಿಕ್ಷಣವನ್ನು ಕೊಟ್ಟವು. ಕೆಲವು ಬೌದ್ಧಶಿಕ್ಷಣವನ್ನಿತ್ತವು. ಆದರೆ ಕೆಲವು ದೊಡ್ಡ ಕೇಂದ್ರಗಳಲ್ಲಿ ಎರಡೂ ಬಗೆಯ ಶಿಕ್ಷಣಗಳು ದೊರೆಯುವ ಏರ್ಪಾಡು ಇದ್ದಿತು. ಅತಿ ಉಚ್ಚ ತರಗತಿಯ ಶಿಕ್ಷಣವನ್ನು ಕೊಡುವ ವ್ಯವಸ್ಥೆಯಿದ್ದ ಕೇಂದ್ರಗಳು ಆಗಿನ ಕಾಲದ ವಿಶ್ವವಿದ್ಯಾಲಯಗಳೆನಿಸಿದವು. ಇವುಗಳಲ್ಲಿ ತಕ್ಷಶಿಲೆ, ನಾಲಂದಾ ಮತ್ತು ವಿಕ್ರಮಶಿಲೆಗಳಲ್ಲಿಯ ವಿಶ್ವವಿದ್ಯಾಲಯಗಳಂತೂ ಭಾರತದ ಒಳಗೂ ಹೊರಗೂ ತಮ್ಮ ಕೀರ್ತಿಯನ್ನು ಬೆಳಗಿದವು.

**ತಕ್ಷಶಿಲಾ ವಿಶ್ವವಿದ್ಯಾಲಯ** :—ಸಿಕಂದರನ ದಾಳಿಯ ಸಮಯದಲ್ಲಿಯೆ ತಕ್ಷಶಿಲೆಯು ಆಂಭಿ ಅರಸನ ರಾಜಧಾನಿಯೆಂದೂ ವ್ಯಾಪಾರದ ಪ್ರಸಿದ್ಧ ಪಡಮೂಲೆಯೆಂದೂ ಸುಪ್ರಸಿದ್ಧ ವಿದ್ಯಾಕೇಂದ್ರವೆಂದೂ ಘನತೆಹೊಂದಿತ್ತು.

ಇತರ ವಿದ್ಯಾಪೀಠಗಳಲ್ಲಿ ತಮ್ಮ ಶಿಕ್ಷಣವನ್ನು ಕೊನೆಗೊಳಿಸಿದ ಎಷ್ಟೋ ವಿದ್ಯಾರ್ಥಿಗಳು ಹೆಚ್ಚಿನ ಶಿಕ್ಷಣವನ್ನು ಪಡೆಯುವ ಉತ್ಸಾಹದಿಂದ ಇಲ್ಲಿಗೆ ಗುಂಪುಗುಂಪಾಗಿ ಬರುತ್ತಿದ್ದರು. ಈ ವಿಶ್ವವಿದ್ಯಾಲಯವೇ ಆ ವಿದ್ಯಾಪೀಠ ಗಳಲ್ಲಿಯ ಶಿಕ್ಷಣದ ವಿಷಯ, ಶಿಕ್ಷಣದ ಕ್ರಮ ಮೊದಲಾದವುಗಳನ್ನು ಗೊತ್ತು ಪಡಿಸುತ್ತಿದ್ದಂತೆ ತೋರುತ್ತದೆ. ಈ ದೃಷ್ಟಿಯಿಂದ ತಕ್ಷಶಿಲೆಯು ಆಗಿನ ಕಾಲ ದಲ್ಲಿ ಒಂದು ಮಧ್ಯವರ್ತಿ-ವಿಶ್ವವಿದ್ಯಾಲಯವಾಗಿತ್ತೆಂದೇ ಹೇಳಬಹುದು.

**ವಿದ್ಯಾರ್ಥಿಗಳು:–** ಇಲ್ಲಿ ವಿದ್ಯೆಕಲಿಯಲಿಕ್ಕೆ ಬರುತ್ತಿದ್ದವರು ಭಾರ ತದ ಬೇರೆಬೇರೆ ಭಾಗಗಳಿಗೆ ಸೇರಿದವರು. ದೂರದೂರದಿಂದಲೂ ಬರು ತ್ತಿದ್ದರು.[೧] ವಿದ್ಯಾರ್ಥಿಗಳಲ್ಲಿ ಬ್ರಾಹ್ಮಣ ಮತ್ತು ಕ್ಷತ್ರಿಯ ವರ್ಗಗಳವರೇ ಹೆಚ್ಚಾಗಿದ್ದರು. ಪ್ರವೇಶಪಡೆಯಲು ವಿದ್ಯಾರ್ಥಿಯು ೧೬ ವರುಷ ವಯಸ್ಸಿನವನಿರಬೇಕೆಂದು ಗೊತ್ತುಮಾಡಲಾಗಿತ್ತು. ಶಿಕ್ಷಣದ ಅವಧಿ ಏಳು ವರುಷವಿದ್ದಿತು. ವಿದ್ಯಾಶುಲ್ಕವನ್ನು[೨] ಇಂತಿಷ್ಟೇಯೆಂದು ಗೊತ್ತುಮಾಡ ಲಾಗಿತ್ತು. ಸಾಮಾನ್ಯವಾಗಿ ಅದನ್ನು ಪ್ರಾರಂಭದಲ್ಲಿಯೆ ಸಲ್ಲಿಸಬೇಕಾಗು ತ್ತಿತ್ತು. ಗುರುಸೇವೆ[೩] ಮಾಡುವ ವಿದ್ಯಾರ್ಥಿಗಳಿಗೆ ವಿದ್ಯಾಶುಲ್ಕದ ಒತ್ತಾಯ ವಿದ್ದಿಲ್ಲ. ತೀರ ಬಡ ವಿದ್ಯಾರ್ಥಿಗಳ ಶುಲ್ಕವನ್ನು ಸಾರ್ವಜನಿಕರು ಒಟ್ಟು ಗೂಡಿಸಿ ಕೊಡುತ್ತಿದ್ದರು. ಇಂತಹ ವಿದ್ಯಾರ್ಥಿಗಳಿಗೆ ನೆರೆಹೊರೆಯ ಹಳ್ಳಿಗ ರಿಂದ ಊಟ ದೊರೆಯುವಂತೆ ವ್ಯವಸ್ಥೆ ಮಾಡಲಾಗಿತ್ತು. ಕೆಲವು ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನಗಳು ದೊರೆಯುತ್ತಿದ್ದವು. ಅವನ್ನು ಆಯಾ ದೇಶಗಳ ರಾಜರೇ ಕೊಡುತ್ತಿದ್ದರು.

**ಶಿಕ್ಷಣದ ವಿಷಯಗಳು :—** ಮೂರು ವೇದಗಳು[೪] ಇಲ್ಲವೆ ಧರ್ಮ

---

೧. ಉದಾ:— ಮಧ್ಯಭಾರತದ ಮಗಧ, ಕಾಶಿ, ಮಿಥಿಲಾ, ಕೋಸಲ, ಉಜ್ಜಯಿನಿ ಮತ್ತು ಉತ್ತರದ ಶಿಬಿ ಹಾಗು ಕುರು ರಾಜ್ಯಗಳಿಂದ ಬರುತ್ತಿದ್ದರು.

೨. ಈಗಿನ 'ಫೀ' ಹಣ

೩. ಕಾಡಿನಿಂದ ಕಟ್ಟಿಗೆಯನ್ನು ಆಯ್ದು ತರುವದು ಮುಂತಾದವು ಗುರುಸೇವೆಯಲ್ಲಿ ಸಮಾವೇಶವಾಗುತ್ತಿದ್ದವು.

೪. ವೇದಗಳನ್ನು ಅರ್ಥದೊಂದಿಗೆ ಮುಖಪಾಠ ಮಾಡಬೇಕಾಗುತ್ತಿತ್ತು. ತಕ್ಷಶಿಲೆ ಯಲ್ಲಿ ಒಬ್ಬ ಆಚಾರ್ಯನಿಂದ ೫೦೦ ವಿದ್ಯಾರ್ಥಿಗಳು ವೇದಾಭ್ಯಾಸ ಮಾಡುತ್ತಿದ್ದ ರಂತೆ.

ಶಾಸ್ತ್ರಗಳು, ಸಾಹಿತ್ಯ, ವ್ಯಾಕರಣ, ತತ್ತ್ವಜ್ಞಾನ, ಕಲಾಶಾಸ್ತ್ರಗಳು,[೧] ವಿಜ್ಞಾನ ಮತ್ತು ತಂತ್ರವಿದ್ಯೆ ಇವು ಇಲ್ಲಿಯ ಶಿಕ್ಷಣದ ಮುಖ್ಯ ವಿಷಯಗಳಾಗಿದ್ದವು. ಧರ್ಮಶಾಸ್ತ್ರ, ಧನುರ್ವಿದ್ಯೆ ಮತ್ತು ವೈದ್ಯವಿದ್ಯೆಗಳಲ್ಲಿಯಂತೂ ಅತಿ ಮಿಗಿಲಾದ ಶಿಕ್ಷಣ ದೊರೆಯುತ್ತಿತ್ತು. ಇವುಗಳ ಸಲುವಾಗಿ ಪ್ರತ್ಯೇಕ ವಿದ್ಯಾಲಯಗಳಿದ್ದವು. ವೈದ್ಯವಿದ್ಯೆಯ ಶಿಕ್ಷಕನು ಜಗತ್ಪ್ರಸಿದ್ಧನಿದ್ದಂತೆ ತೋರುತ್ತದೆ. ಇವನಿಂದ ಶಿಕ್ಷಣ ಪಡೆದ ಜೀವಕಕೌಮಾರ (ಭಚ್ಛ) ಭೃತ್ಯನೆಂಬವನು ಶಸ್ತ್ರ ಚಿಕಿತ್ಸೆಯಲ್ಲಿ ಅತ್ಯಂತ ಪ್ರವೀಣನಾದನು. ಆದರಲ್ಲಿ ಇವನನ್ನು ಸರಿಗಟ್ಟುವವರು ಆ ಕಾಲದಲ್ಲಿ ಯಾರೂ ಇರಲಿಲ್ಲ. ಇವನ ಅದ್ಭುತ ಚಾತುರ್ಯದ ಉದಾಹರಣೆಗಳು ಎಷ್ಟೋ ಕೊಡಲ್ಪಟ್ಟಿವೆ.[೨] ಯುದ್ಧವಿದ್ಯೆಯನ್ನು ಕಲಿಯಲಿಕ್ಕೆ ಇಲ್ಲಿಯ ಶಿಕ್ಷಣಾಲಯದಲ್ಲಿ ಭಾರತದ ಎಲ್ಲ ರಾಜಕುಮಾರರು[೩] ವಿದ್ಯಾರ್ಥಿಗಳಾಗಿದ್ದರಂತೆ!

**ಶಿಸ್ತು ಮತ್ತು ಸಂಘಟನೆ:**— ಶಿಕ್ಷಣ ಪಡೆಯುವದರಲ್ಲಿ ಎಲ್ಲರೂ ಸರಿಸಮಾನರೆಂದು ತಿಳಿಯಲಾಗುತ್ತಿತ್ತು. ಬಡವ, ಬಲ್ಲಿದ ಎಂಬ ಭೇದ ಭಾವವಿರಲಿಲ್ಲ. ಶಿಕ್ಷಣದ ವಿಷಯಗಳ ಆಯ್ಕೆಯಲ್ಲಿ ಜಾತಿಭೇದವಿರಲಿಲ್ಲ. ಶ್ರಮಜೀವಿಗಳಾದ ವಿದ್ಯಾರ್ಥಿಗಳಿಗೂ ಗೌರವವಿತ್ತು. ಜೀವನವು ಸಾದಾರೀತಿಯಿಂದ ನಡೆಯಬೇಕೆಂದು ನಿರ್ಬಂಧವಿತ್ತು. ಶಿಕ್ಷಣಕ್ಕಾಗಿ ವಿಷಯಗಳ ಆಯ್ಕೆಯಲ್ಲಿ ವಿದ್ಯಾರ್ಥಿಗಳಿಗೆ ಸ್ವಾತಂತ್ರ್ಯವಿತ್ತು. ಕೆಲವು ವಿಷಯಗಳಲ್ಲಿ ತಾತ್ತ್ವಿಕ ಪರೀಕ್ಷೆಯೊಂದಿಗೆ ಪ್ರಾಯೋಗಿಕ ಪರೀಕ್ಷೆಯೂ ನಡೆಯುತ್ತಿತ್ತು. ಶಿಕ್ಷಣಾ

೧. ಕಲಾಶಾಸ್ತ್ರಗಳ ಒಟ್ಟು ಸಂಖ್ಯೆ, ೧೮

೨. ಒಮ್ಮೆ ಕಾಶಿಯಲ್ಲಿ ಒಬ್ಬ ಬೇನೆಯವನು ಕರುಳುರೋಗದಿಂದ ಬಳಲುತ್ತಿದ್ದನಂತೆ. ಕೌಮಾರಭೃತ್ಯನು ಅವನ ಹೊಟ್ಟೆಯನ್ನು ಕೊಯ್ದು, ತೊಡಕುಬಿದ್ದಿದ್ದ ಕರುಳನ್ನು ಹೊರಗೆ ತೆಗೆದು ಸರಿಪಡಿಸಿ, ಮತ್ತೆ ಅದನ್ನು ಅದರ ಯೋಗ್ಯಸ್ಥಳದಲ್ಲಿಟ್ಟು ಹೊಟ್ಟೆಯನ್ನು ಹೊಲಿದು ರೋಗಿಯನ್ನು ಗುಣಪಡಿಸಿದನಂತೆ! ರೋಗ ಚಿಕಿತ್ಸೆಗಾಗಿ ಇವನು ಭಾರತದ ದೂರದೂರದ ಭಾಗಗಳಿಗೂ ಹೋಗಬೇಕಾಗುತ್ತಿತ್ತು. ಮಗಧದ ಬಿಂಬಿಸಾರನೆಂಬ ಅರಸನಿಗೂ ಗೌತಮಬುದ್ಧನಿಗೂ ಇವನು ಔಷಧೋಪಚಾರ ಮಾಡಿದನಂತೆ.

೩. ಇವರ ಒಟ್ಟು ಸಂಖ್ಯೆಯು ೧೦೩ ಇದ್ದಿತೆಂದು ಹೇಳಲಾಗುತ್ತದೆ.

ವಧಿಯ ಕೊನೆಗೆ, ಸಿರಿವಂತರಿದ್ದ ವಿದ್ಯಾರ್ಥಿಗಳು ಭಾರತದಲ್ಲಿಯ ಪರ ರಾಜ್ಯಗಳಿಗೆ ಪ್ರವಾಸ ಕೈಕೊಳ್ಳುತ್ತಿದ್ದರು. ಇದರಿಂದ ಅವರಿಗೆ ಸಾಮಾನ್ಯ ಜನಜೀವನದ ಜ್ಞಾನವಾಗುತ್ತಿತ್ತು. ಸಂಕುಚಿತ ಮನೋಭಾವ ಕಳೆದು ಹೋಗುತ್ತಿತ್ತು. ಗರ್ವ, ದುರಹಂಕಾರಗಳು ನಾಶವಾಗುತ್ತಿದ್ದವು. ಶಿಕ್ಷಕರಿಲ್ಲದ ವೇಳೆಯಲ್ಲಿ 'ಹಿರೇಮಣಿಗಳು' ಶಿಕ್ಷಣವನ್ನು ಸಾಗಿಸುತ್ತಿದ್ದರು. ಗುರು ಸೇವೆಯಲ್ಲಿದ್ದ ವಿದ್ಯಾರ್ಥಿಗಳಿಗೆ ರಾತ್ರಿಯಲ್ಲಿ ಶಿಕ್ಷಣವನ್ನು ಕೊಡಲಾಗುತ್ತಿತ್ತು. ಸ್ನಾನ, ಭೋಜನಾದಿಗಳಿಗೆ ವೇಳೆಯನ್ನು ಗೊತ್ತುಪಡಿಸಲಾಗಿತ್ತು.

ಹುಯೆನ-ತ್ಸಂಗನು ತಕ್ಷಶಿಲೆಯನ್ನು ಸಂದರ್ಶಿಸಿದಾಗ, ಅಲ್ಲಿಯ ವಿಹಾರಗಳು ಹಾಳುಸ್ಥಿತಿಯಲ್ಲಿದ್ದವು. ಹೂಣರ ದಾಳಿಗಳಿಂದ ಈ ವಿಶ್ವ ವಿದ್ಯಾಲಯವು ಹಾಳಾಯಿತು.

**ನಾಲಂದಾ ವಿಶ್ವವಿದ್ಯಾಲಯ:-**

'ನಾಲಂದಾ' ಇದು ದಕ್ಷಿಣ ಬಿಹಾರದಲ್ಲಿ 'ರಾಜಗೃಹ' ದಿಂದ ಏಳು ಮೈಲು ಉತ್ತರಕ್ಕೆ ಇತ್ತೆಂದು ಹೇಳಲಾಗುತ್ತದೆ.[೧] ಇಲ್ಲಿ ಮೊಟ್ಟ ಮೊದಲಿನ ವಿಹಾರವು ಅಶೋಕ ಚಕ್ರವರ್ತಿಯಿಂದ ಕಟ್ಟಲ್ಪಟ್ಟಿತು. ಆದ್ದರಿಂದ ಅವನೇ ಅಲ್ಲಿಯ ವಿದ್ಯಾಪೀಠದ ಸ್ಥಾಪಕನೆಂದು ಹೇಳಬಹುದು. ಆದರೂ ಇದು ೫ನೆಯ ಶತಮಾನದಲ್ಲಿ ಕೂಡ, ವೈದಿಕ ವಿದ್ಯಾಪೀಠವಾಗಿತ್ತೆಂದು ಕೆಲವರ ಅಭಿಪ್ರಾಯ. ಆದರೆ ಮುಂದೆ ಮೂರೇ ಶತಮಾನಗಳಲ್ಲಿ ನಾಲಂದವು ಅತ್ಯಂತ ಮಹತ್ವದ ಬೌದ್ಧ ವಿದ್ಯಾಕೇಂದ್ರವಾಗಿ ಪರಿಣಮಿಸಿತು.[೨] ಗುಪ್ತವಂಶದ ಅರಸರು ಮತ್ತು ಹರ್ಷ ಚಕ್ರವರ್ತಿಯು ಅಲ್ಲಿ ವಿಹಾರಗಳನ್ನು ಕಟ್ಟಿ ನಾಲಂದಾದ ಘನತೆಗೆ ವಿಶೇಷ ಕಾರಣರಾದರು. ಚೀನದಿಂದ ಬೌದ್ಧ ಯಾತ್ರಿಕನಾಗಿ ಬಂದ ಹುಯೆನ-ತ್ಸಂಗನು ನಾಲಂದವನ್ನು ಸಂದರ್ಶಿಸಿದಾಗ, ಹರ್ಷನು ಕಟ್ಟಿ ಕೊಟ್ಟಿದ್ದ ವಿಹಾರ[೩] ಮತ್ತು ಅದರ ಎತ್ತರವಾದ ಗೋಡೆಗಳು ಅವನ

---

೧. ಈಗಿನ ಪಾಟ್ನಾ ಜಿಲ್ಲೆಯಲ್ಲಿ—ಪಾಟ್ನಾ ಪಟ್ಟಣದಿಂದ ಸುಮಾರು ೪೦ ಮೈಲು ದಕ್ಷಿಣದಲ್ಲಿ

೨. ಜೊತೆಗೆ ವೈದಿಕವಿದ್ಯೆಯ ಶಿಕ್ಷಣವೂ ನಡೆಯುತ್ತಿತ್ತು

೩. ಇದು ಹಿತ್ತಾಳೆಯಿಂದ ರಚಿತವಾಗಿದ್ದಿತಂತೆ.

ಕಣ್ಣಿಗೆ ಬಿದ್ದವಂತೆ. ಸುಮಾರು ೮೦ ಅಡಿ ಎತ್ತರದ ಬುದ್ಧನ ಕಂಚಿನ (ಇಲ್ಲವೆ ತಾಮ್ರದ) ಪುತ್ಥಳಿಯೊಂದನ್ನು ಅವನು ಕಂಡನು.[೧] ನಾಲಂದವು ಬಂಗಾಲದ 'ಪಾಲ' ಮನೆತನದ ಸಮ್ರಾಟರ ಪ್ರಭಾವಕ್ಕೊಳಪಟ್ಟಿತ್ತು. 'ಧರ್ಮಪಾಲ' ಎಂಬವನು ವೀರದೇವನೆಂಬವನನ್ನು ನಾಲಂದಾದ ಮಠಾಧಿಪತಿ ಯನ್ನಾಗಿ ನೇಮಿಸಿದ್ದನಂತೆ. ಮಲಯ ದ್ವೀಪಕಲ್ಪದ ಶೈಲೇಂದ್ರ ಮನೆತನದ ಅರಸನೊಬ್ಬನು ಇಲ್ಲಿ ವಿಹಾರವನ್ನು ಕಟ್ಟಿ, 'ದೇವಪಾಲ'ನಿಂದ ಇದರ ಸಲುವಾಗಿ ೫ ಹಳ್ಳಿಗಳನ್ನು ಉಂಬಳಿಯಾಗಿ ದೊರಕಿಸಿದನು.

ವಿಶ್ವವಿದ್ಯಾಲಯದ ಕ್ಷೇತ್ರವು ವಿಸ್ತಾರವಾಗಿದ್ದು, ಶಿಕ್ಷಣದ ಕಟ್ಟಡ ಗಳು ಭವ್ಯವಾಗಿದ್ದವು. ಅವುಗಳಿಗೆ ಅಂತಸ್ತು (ಉಪ್ಪರಿಗೆ) ಗಳಿದ್ದವು.[೨] ಸುತ್ತುಮುತ್ತು ರಮ್ಯವಾದ ಉಪವನಗಳು, ಮಾವಿನ ತೋಪುಗಳು, ತಿಳಿ ನೀರಿನ ಪುಷ್ಕರಣಿ (ಹೊಂಡ ಅಥವಾ ಕೊಳ) ಗಳಿದ್ದವು. ವಿಹಾರಗಳ ವಾಸ್ತುಶಿಲ್ಪ ಕೆಲಸವು ಉತ್ಕೃಷ್ಟವಿತ್ತೆಂದು ಹುಯೆನ-ತ್ಸಂಗನು ಅಭಿಪ್ರಾಯ ಪಟ್ಟಿರುವನು. ವಿಶ್ವವಿದ್ಯಾಲಯದ ವೆಚ್ಚಕ್ಕಾಗಿ ೧೦೦ ಹಳ್ಳಿಗಳ ಭೂಕಂದಾ ಯವು ಉಂಬಳಿಯಾಗಿ ದೊರೆಯುತ್ತಿತ್ತು. ಈ ಹಳ್ಳಿಗಳ ಸಂಖ್ಯೆಯು ಬರಬರುತ್ತ ೨೦೦ಕ್ಕೇರಿತು. ಈ ರೀತಿಯಿಂದ ವಿಶ್ವವಿದ್ಯಾಲಯದ ವೆಚ್ಚಕ್ಕೆ ಹಣದ ಕೊರತೆ ಇರಲಿಲ್ಲ.

**ಶಿಕ್ಷಣದ ವಿವರಗಳು** :— ಶಿಕ್ಷಣಕ್ಕಾಗಿ ನಾಲಂದಾದಲ್ಲಿ ನೆಲಸಿದವರ ಸಂಖ್ಯೆಯು ಯಾವಾಗಲೂ ೧೦,೦೦೦[೩] ವಿರುತ್ತಿತ್ತೆಂದು ಹುಯೆನ-ತ್ಸಂಗನು ಹೇಳಿರುವನು! ವಿದ್ಯಾರ್ಥಿಗಳು ಭಾರತದ ಬೇರೆ ಬೇರೆ ಭಾಗಗಳಿಗೆ ಸೇರಿದವರು. ಅಲ್ಲದೆ ಚೀನ, ತಿಬೇಟ, ಕೋರಿಯಾ ಮತ್ತು ಮಂಗೋಲಿಯ ದಂತಹ ದೂರದ ದೇಶಗಳಿಂದ ನಾಮಾಂಕಿತ ಪಂಡಿತರೂ ಹೆಚ್ಚಿನ ಶಿಕ್ಷಣ ಕ್ಕಾಗಿ ಇಲ್ಲಿಗೆ ಬರುತ್ತಿದ್ದರು. ನಾಲಂದಾದಲ್ಲಿ ವಿದ್ಯಾರ್ಥಿಗಳಿಗೆ ಆಹಾರ, ಆಶ್ರಯ, ಆಚ್ಛಾದನಗಳು ಪುಕ್ಕಟೆಯಾಗಿ ದೊರೆಯುತ್ತಿದ್ದವು. ಜೊತೆಗೆ,

---

೧. ಇದನ್ನಾದರೂ ಹರ್ಷನೆ ಈ ವಿಶ್ವವಿದ್ಯಾಲಯಕ್ಕೆ ದಾನ ಮಾಡಿದ್ದನಂತೆ.

೨. ರತ್ನಸಾಗರವೆಂಬ ಅಲ್ಲಿಯ ಗ್ರಂಥಾಲಯವು ೯ ಅಂತಸ್ತುಗಳ ಕಟ್ಟಡವಿತ್ತು.

೩. ಸುಮಾರು ೮೫೦೦ ವಿದ್ಯಾರ್ಥಿಗಳು, ೧೫೦೦ ಶಿಕ್ಷಕರು.

ಔಷಧೋಪಚಾರವೂ ಪುಕ್ಕಟೆಯಾಗಿ ಸಿಗುತ್ತಿತ್ತು. ಉಚ್ಚಶಿಕ್ಷಣಕ್ಕಾಗಿ, ಇಪ್ಪತ್ತು ವರುಷಗಳ ಕೆಳಗಿನ ವಯಸ್ಸಿನವರಿಗೆ ಪ್ರವೇಶವಿರಲಿಲ್ಲ. ತುಂಬ ಯೋಗ್ಯತೆಯುಳ್ಳವರಿಗಷ್ಟೇ ಪ್ರವೇಶ ದೊರೆಯುತ್ತಿತ್ತು. ನಾಲಂದಾ ವಿಶ್ವ ವಿದ್ಯಾಲಯದ ಪದವೀಧರನಾಗುವದೆಂದರೆ ವಿದ್ವತ್ತೆಯಲ್ಲಿ ಎಲ್ಲಕ್ಕೂ ಮಿಗಿಲಾದ ಪ್ರಶಸ್ತಿ-ಪತ್ರಿಕೆಯನ್ನು ದೊರಕಿಸಿದಂತೆಯೇ ಸೈ. ಮಾಧ್ಯಮಿಕ ಶಿಕ್ಷಣಕ್ಕೆ ಮೇಲೆ ಹೇಳಿದ ವಯಸ್ಸಿನ ನಿರ್ಬಂಧವಿರಲಿಲ್ಲ.

ಇಲ್ಲಿ ಬೌದ್ಧ ಮತ್ತು ವೈದಿಕ ಈ ಎರಡೂ ಧರ್ಮಗಳಿಗೆ ಸಂಬಂಧಿಸಿದ ಶಿಕ್ಷಣವನ್ನು ಕೊಡಲಾಗುತ್ತಿತ್ತು. ಮಹಾಯಾನ ಮತ್ತು ಹೀನಯಾನ ಪಂಥಗಳ ಶಿಕ್ಷಣವೂ ದೊರೆಯುತ್ತಿತ್ತು. ಒಂದೇ ಮಾತಿನಲ್ಲಿ ಹೇಳುವದಾದರೆ, ನಾಲಂದವು ಜ್ಞಾನದ ಎಲ್ಲ ಶಾಖೋಪಶಾಖೆಗಳ ಕೇಂದ್ರವಾಗಿತ್ತು.[೧] ಇಲ್ಲಿ ರತ್ನಸಾಗರ, ರತ್ನೋದಧಿ, ರತ್ನರಂಜಕಗಳೆಂಬ ಮೂರು ಅತಿ ದೊಡ್ಡ ಗ್ರಂಥಾಲಯಗಳಿದ್ದವು. ಪ್ರತಿದಿನ, ೧೦೦ ಬೇರೆ ಬೇರೆ ವಿಷಯಗಳಲ್ಲಿ ಶಿಕ್ಷಣವು ದೊರೆಯುತ್ತಿತ್ತು. ನಿದ್ರೆಗೆ ಗೊತ್ತುಪಡಿಸಿದ ವೇಳೆಯನ್ನು ಹೊರತುಪಡಿಸಿ ಮಿಕ್ಕ ಎಲ್ಲ ವೇಳೆಯಲ್ಲಿ ಅಧ್ಯಯನ, ಅಧ್ಯಾಪನಗಳು ನಡೆಯುತ್ತಿದ್ದವು. ವಿದ್ಯಾರ್ಥಿಗಳ ನೈತಿಕ ಮಟ್ಟವಾದರೂ ಉಚ್ಚವಿತ್ತು. ಇಡೀ ಭಾರತಕ್ಕೇ ಅವರು ಆದರ್ಶರಾಗಿದ್ದರಂತೆ! ನಿತ್ಯದ ಕಾರ್ಯಕ್ರಮವು ವೇಳಾಪತ್ರಿಕೆಯಂತೆ ಸಾಗುತ್ತಿತ್ತು. ಸ್ನಾನ ಭೋಜನಾದಿಗಳಿಗೂ ವೇಳೆಯನ್ನು ಗೊತ್ತುಮಾಡಲಾಗಿತ್ತು.[೨] ನೀರ್ಗಡಿಯಾರದಿಂದ[೩] ವೇಳೆಯನ್ನು ಅಳೆದು ತಾಸಿಗೊಮ್ಮೆ ನಗಾರಿ ಮತ್ತು ಶಂಖಗಳ ಸಹಾಯದಿಂದ ಜನರಿಗೆ ವೇಳೆಯನ್ನು ಸೂಚಿಸಲಾಗುತ್ತಿತ್ತು (ಚಿತ್ರ ೨ ನೋಡಿರಿ).

---

೧. ವೇದಗಳು; ವೇದಾಂಗಗಳು; ಧರ್ಮಶಾಸ್ತ್ರ; ಲೌಕಿಕ, ತಾತ್ತ್ವಿಕ, ವ್ಯಾವಹಾರಿಕ ವಿಷಯಗಳು; ವಿಜ್ಞಾನ; ಸಾಹಿತ್ಯ; ಕಲಾಶಾಸ್ತ್ರಗಳು ಇವೆಲ್ಲವೂ ಇಲ್ಲಿ ಕಲಿಸಲ್ಪಡುತ್ತಿದ್ದವು.

೨. ಹುಯೆನ-ತ್ಸಂಗನ ಹೇಳಿಕೆಯ ಮೇರೆಗೆ, ೭೦೦ ವರುಷಗಳ ಅವಧಿಯಲ್ಲಿ ನಾಲಂದಾದ ಒಬ್ಬ ವಿದ್ಯಾರ್ಥಿಯೂ ಸಂಘದ ನಿಯಮಗಳನ್ನು ಉಲ್ಲಂಘಿಸಿದ ಉದಾಹರಣೆ ಇರಲಿಲ್ಲ !

೩. ಘಟಿಕಾಯಂತ್ರ (ಘಟಿಕಾಪಾತ್ರೆ)

ನಾಲಂದಾ ವಿಶ್ವವಿದ್ಯಾಲಯದಲ್ಲಿ ಬೇರೆಬೇರೆ ದೇಶ, ಧರ್ಮ, ಪಂಥ, ಆಚಾರ, ವಿಚಾರಗಳ ಜನರಿದ್ದರೂ ಅಲ್ಲಿಯ ಅವರ ಜೀವನದಲ್ಲಿ ಒಂದು ವಿಧದ ಸಮರಸತೆ ಕಂಡುಬರುತ್ತಿತ್ತು. ವ್ಯಕ್ತಿಸ್ವಾತಂತ್ರ್ಯ, ಸಾಮಾಜಿಕ ಜೀವನ, ಸಾಂಘಿಕ ಚಟುವಟಿಕೆ, ಸೇವಾಬುದ್ಧಿ—ಇವು ಅಲ್ಲಿಯ ವಿದ್ಯಾರ್ಥಿಗಳಲ್ಲಿ ಒಡೆದುಕಾಣುತ್ತಿದ್ದವು. ಪರಸ್ಪರರಲ್ಲಿ ಸಹಾಯ-ಸಹಕಾರಗಳು ತೋರುತ್ತಿದ್ದವು. ಧರ್ಮಪ್ರಸಾರಕ್ಕಾಗಿ ಇಲ್ಲಿಯ ಎಷ್ಟೋ ಪಂಡಿತರು ಪರದೇಶಗಳಿಗೆ ಹೋಗುತ್ತಿದ್ದರು. ಹುಯೆನ-ತ್ಸಂಗನು ಇಲ್ಲಿ ಸುಮಾರು ೫ ವರುಷ ಕಾಲಕಳೆದನೆಂದು ತಿಳಿದುಬರುತ್ತದೆ. ಅವನಿಗೆ ಊಟಉಪಚಾರ ಮುಂತಾದವುಗಳಲ್ಲಿ ವಿಶೇಷ ಗೌರವ ಸಲ್ಲುತ್ತಿತ್ತು. ಈ ವಿದ್ಯಾಲಯವು ೧೨ನೆಯ ಶತಮಾನದ ಕೊನೆಯ ಸುಮಾರಕ್ಕೆ ಮುಸಲ್ಮಾನ ದಾಳಿಗಾರರಿಂದ ಹಾಳಾಯಿತು.

## ವಿಕ್ರಮಶಿಲಾ ವಿಶ್ವವಿದ್ಯಾಲಯ :—

ನಾಲಂದಾ ವಿಶ್ವವಿದ್ಯಾಲಯದಂತೆ, ಈ ವಿಶ್ವವಿದ್ಯಾಲಯವಾದರೂ ಅರಸರ ಉದಾರ ದಾನಗಳ ಪ್ರತಿಫಲವಾಗಿ ಅಸ್ತಿತ್ವದಲ್ಲಿ ಬಂದಿತು. ಕ್ರಿ. ಶ. ೮ನೆಯ ಶತಮಾನದಲ್ಲಿ, ಬಂಗಾಲದಲ್ಲಿ 'ಪಾಲ' ಎಂಬ ರಾಜಮನೆತನವು ಪ್ರಸಿದ್ಧಿಗೆ ಬಂದಿತು. ಅದರಲ್ಲಿ ಅತಿ ಪ್ರಖ್ಯಾತನಾದ ಧರ್ಮಪಾಲನೆಂಬ ಅರಸನು[1] ಈ ವಿದ್ಯಾಲಯದ ಜನಕನೆಂದು ಹೇಳಲಡ್ಡಿಯಿಲ್ಲ. ಇದಕ್ಕಾಗಿ ಅವನು ಆಗಿನ ಉತ್ತರಮಗಧದಲ್ಲಿ ಗಂಗಾನದಿಯ ದಂಡೆಯ ಮೇಲೆ[2] ಎತ್ತರವಾದೊಂದು ಸ್ಥಳದಲ್ಲಿ ಒಂದು ವಿಹಾರವನ್ನು ಕಟ್ಟಿಸಿದನು. ವಿಹಾರದ ಸುತ್ತಲೂ ಒಂದು ಬಲವಾದ ಗೋಡೆ ಇತ್ತು. ಪ್ರಾಕಾರದೊಳಗೆ ೧೦೮ ಚಿಕ್ಕ ದೊಡ್ಡ ಬೌದ್ಧ ದೇವಾಲಯಗಳೂ, ಮಧ್ಯದಲ್ಲಿ ಮಹಾಬೋಧಿ ವಿಗ್ರಹಗಳಿಂದ ಅಲಂಕೃತವಾದ ದೊಡ್ಡದೊಂದು ದೇವಾಲಯವೂ ಕಂಡುಬರುತ್ತಿದ್ದವು.

೧. ಇವನು ಕ್ರಿ. ಶ. ೭೭೫ ರಿಂದ ೮೦೦ ರ ವರೆಗೆ ಆಳಿದನು.
೨. ಈಗಿನ ಭಾಗಲ್ಪುರದಿಂದ ಪೂರ್ವಕ್ಕೆ ೨೪ ಮೈಲು ದೂರದಲ್ಲಿ

ಈ ವಿಶ್ವವಿದ್ಯಾಲಯದಲ್ಲಿ ಶಿಕ್ಷಣದ ಮೇಲ್ವಿಚಾರಣೆಗಾಗಿ ಶ್ರೇಷ್ಠ ತರಗತಿಯ ಶಿಕ್ಷಕರ ಸಮಿತಿಯೊಂದಿತ್ತು. ಇದು ನಾಲಂದಾದಲ್ಲಿಯ ಶಿಕ್ಷಣದ ಮೇಲ್ವಿಚಾರಣೆಯನ್ನೂ ನಡಸುತ್ತಿತ್ತು.[೧] ಈ ವಿದ್ಯಾಲಯದಲ್ಲಿ ಬರ ಬರುತ್ತ ಬೇರೆ ಬೇರೆ ಆರು ವಿದ್ಯಾಲಯಗಳುಂಟಾದವು. ಪ್ರತಿಯೊಂದರಲ್ಲಿಯ ಶಿಕ್ಷಕರ ಸಂಖ್ಯೆ, ೧೦೮. ವಿಶ್ವವಿದ್ಯಾಲಯದ ಗೋಡೆಗಳ ಮೇಲೆ, ಶೀಲ, ಪಾಂಡಿತ್ಯಗಳಿಗೆ ಪ್ರಖ್ಯಾತಿ ಪಡೆದ ವಿದ್ವಾಂಸರ ಚಿತ್ರಗಳಿದ್ದವು. ಪ್ರಾಕಾರದ ಗೋಡೆಯ ಶಿಲ್ಪಕಲೆಯು ಉತ್ತಮವಿದ್ದು ಅದರ ಮೇಲೆಯೂ ಚಿತ್ರ ಕಲೆಯ ಉದಾಹರಣೆಗಳು ಕಂಡುಬರುತ್ತಿದ್ದವು. ವಿದ್ಯಾಲಯಗಳ ಮಧ್ಯದಲ್ಲಿ 'ವಿಜ್ಞಾನಮಂದಿರ' ಎಂಬ ಆರು ಬಾಗಿಲಗಳುಳ್ಳ ಒಂದು ಭವ್ಯ ಕಟ್ಟಡವಿತ್ತು. ಒಂದೊಂದು ಬಾಗಿಲದಿಂದ ಒಂದೊಂದು ವಿದ್ಯಾಲಯಕ್ಕೆ ಪ್ರವೇಶ ಹೊಂದಬಹುದಿತ್ತು.

ನಾಲಂದಾದಲ್ಲಿಯಂತೆ ಇಲ್ಲಿಯೂ ವಿದ್ಯಾರ್ಥಿಗಳಿಗೆ ಪ್ರವೇಶವು ಸುಲಭ ವಾಗಿ ದೊರೆಯುತ್ತಿದ್ದಿಲ್ಲ. ಪ್ರತಿಯೊಂದು ವಿದ್ಯಾಲಯದ ಬಾಗಿಲಲ್ಲಿ 'ದ್ವಾರ ಪಂಡಿತ' ರೆಂಬ ಶ್ರೇಷ್ಠ ವಿದ್ವಾಂಸರಿದ್ದರು.[೨] ಅವರಿಂದ ನಡೆಯುತ್ತಿದ್ದ ಪರೀಕ್ಷೆಯಲ್ಲಿ ಉತ್ತೀರ್ಣರಾದ ವಿದ್ಯಾರ್ಥಿಗಳಿಗೇ ವಿಶ್ವವಿದ್ಯಾಲಯದ ಶಿಕ್ಷಣಕ್ಕೆ ಪ್ರವೇಶ ಸಿಗುತ್ತಿತ್ತು. ಇಲ್ಲಿಯೂ ತಿಬೇಟದ ವಿದ್ಯಾರ್ಥಿಗಳು ಶಿಕ್ಷಣ ಪಡೆ ಯುತ್ತಿದ್ದರು. ಇಲ್ಲಿಯ ಎಷ್ಟೋ ವಿದ್ವಾಂಸರು ಬೌದ್ಧಧರ್ಮ ಪ್ರಸಾರಕ್ಕಾಗಿ ತಿಬೇಟಕ್ಕೆ ಹೋಗುತ್ತಿದ್ದರು. ಸಂಸ್ಕೃತ ಗ್ರಂಥಗಳನ್ನು ತಿಬೇಟದ ಭಾಷೆಗೆ ಭಾಷಾಂತರಿಸಿ ಅಲ್ಲಿ ಬೌದ್ಧಧರ್ಮದ ಪ್ರಭಾವವನ್ನು ಬೀರಿದ ವಿದ್ವಾಂಸರ ಎಷ್ಟೋ ಉದಾಹರಣೆಗಳಿವೆ. ಇವರಲ್ಲಿ 'ದೀಪಂಕರ ಶ್ರೀಜ್ಞಾನ' ( ಆಚಾರ್ಯ

---

೧. ಬಂಗಾಲದ ಧರ್ಮಪಾಲನೇ ಈ ಎರಡೂ ವಿಶ್ವವಿದ್ಯಾಲಯಗಳ ನೇತೃತ್ವವನ್ನು ವಹಿಸಿದ್ದರಿಂದ, ಆಡಳಿತೆಯಲ್ಲಿ ಈ ಬಗೆಯ ಸಮೀಕರಣವು ಸಾಧ್ಯವಾಗಿರ ಬಹುದು. ಒಂದರಲ್ಲಿಯ ಶಿಕ್ಷಕರನ್ನು ಬೇರೊಂದಕ್ಕೆ ವರವ್ಮಾಡುವ ರೂಢಿ ಯಿತ್ತೆಂದು ಕಂಡುಬರುತ್ತದೆ.

೨. ಹತ್ತನೆಯ ಶತಮಾನದಲ್ಲಿ ರತ್ನಾಕರಶಾಂತಿ, ವಾಗೀಶ್ವರಕೀರ್ತಿ, ಪ್ರಜ್ಞಾಕರಮತಿ, ಜ್ಞಾನಶ್ರೀಮಿತ್ರ, ರತ್ನವಜ್ರ ಮತ್ತು ನರೋಪರೆಂಬವರು ದ್ವಾತಪಂಡಿತರಿದ್ದರು.

ಅತಿಶ)ನೆಂಬವನು ಅತಿ ಪ್ರಸಿದ್ಧನು. ತಿಬೇಟದ ಅರಸನೂ ಪ್ರಜೆಗಳೂ ಇವನನ್ನು ಅಭೂತಪೂರ್ವ ಗೌರವದಿಂದ ಸತ್ಕರಿಸಿ ತಮ್ಮಲ್ಲಿಗೆ ಬರಮಾಡಿಕೊಂಡರು. ಇವನು ಇಲ್ಲಿಯ ಬೌದ್ಧಮತದ ಲೋಪದೋಷಗಳನ್ನು ತಿದ್ದಿ 'ಲಾಮಾ' ಎಂಬ ಹೆಸರಿನ ಹೊಸ ಪಂಥವನ್ನು ನಿರ್ಮಿಸಿದನು.

ಈ ವಿಶ್ವವಿದ್ಯಾಲಯವು ೧೩ನೆಯ ಶತಮಾನದ ಆರಂಭದಲ್ಲಿ ಮುಸಲ್ಮಾನರಿಂದ ಹಾಳಾಯಿತು.

## ಅಭ್ಯಸನಗಳು.

೧. ನೀವು ಹುಯೆನ-ತ್ಸಂಗನೆಂದು ಭಾವಿಸಿ, ಅವನು ಕೈಕೊಂಡ ಪ್ರವಾಸವನ್ನು ಬಾಯಿಮಾತಿನಿಂದ ಸ್ವಲ್ಪದರಲ್ಲಿ ಹೇಳಿರಿ.
೨. ನಾಲಂದಾ ವಿಶ್ವವಿದ್ಯಾಲಯದ ವಿದ್ಯಾರ್ಥಿಜೀವನದ ವೃತ್ತಾಂತವನ್ನು ೮-೧೦ ವಾಕ್ಯಗಳಲ್ಲಿ ಬರೆಯಿರಿ.
೩. ಭಾರತದ ಬಾಹ್ಯರೇಷೆಯ ನಕಾಶದಲ್ಲಿ, ಪ್ರಾಚೀನ ಭಾರತದ ವಿದ್ಯಾಕೇಂದ್ರಗಳನ್ನು ಗುರುತುಮಾಡಿರಿ.

## ೧೩ನೆಯ ಪ್ರಕರಣ



ಚಿತ್ರ ೧. ಹರ್ಷನೂ ರಾಜ್ಯಶ್ರೀಯೂ—ವಿಂಧ್ಯಾಟವಿಯಲ್ಲಿ.



ಚಿತ್ರ ೩. ಚಾಲುಕ್ಯ ಅರಸರ ಶಿಲ್ಪಕಲೆ. ( ಬಾದಾಮಿ ಗುಡ್ಡದಲ್ಲಿ ಕೊರೆಯಿಸಿದ ಗುಹೆಗಳು. )

( ಕನ್ನಡ ಸಂಶೋಧನ ಸಂಸ್ಥೆಯ ಡಾಯರೆಕ್ಟರರ ಕೃಪೆಯಿಂದ )



ಚಿತ್ರ ೪.  ಕೊಟ್ಟಾ (ಕಂಬುಜ)ದಲ್ಲಿಯ ಗುಡಿಯಲ್ಲಿ ರಾಜೇಂದ್ರ ಚೋಳನು.

## ೧೩ನೆಯ ಪ್ರಕರಣ

# ಹರ್ಷ, ಪುಲಿಕೇಶಿ ಮತ್ತು ರಾಜೇಂದ್ರ ಚೋಳ.

### ೧. ಹರ್ಷವರ್ಧನ (ಕ್ರಿ. ಶ. ೬೦೬ ರಿಂದ ೬೪೭ ರ ವರೆಗೆ):—

ಹರ್ಷನು ದಿಲ್ಲಿಯ ನೆರೆಯ ಠಾಣೇಶ್ವರದಲ್ಲಿ ರಾಜ್ಯಭಾರ ಮಾಡುತ್ತಿದ್ದ ವರ್ಧನ ಮನೆತನದ ಪ್ರಭಾಕರವರ್ಧನನೆಂಬ ರಾಜನ ಮಗನು. ಹರ್ಷವರ್ಧನನಿಗೆ ರಾಜ್ಯವರ್ಧನನೆಂಬ ಅಣ್ಣನೂ ರಾಜ್ಯಶ್ರೀಯೆಂಬ ತಂಗಿಯೂ ಇದ್ದರು. ಪ್ರಭಾಕರವರ್ಧನನು ರಾಜ್ಯಶ್ರೀಯನ್ನು ಕನೋಜದ ಗ್ರಹವರ್ಮನೆಂಬ ರಾಜನಿಗೆ ಮದುವೆ ಮಾಡಿಕೊಟ್ಟನು. ಮೊದಲೇ ಪ್ರಬಲನಿದ್ದ ಪ್ರಭಾಕರ ವರ್ಧನನ ಬಲವು ಇದರಿಂದ ಮತ್ತೂ ಬೆಳೆಯಿತು. ಗುಪ್ತವಂಶದ ಕೆಲವು ಅರಸರಂತೆ ಹೂಣರ ಕ್ರೂರ ದಾಳಿಗಳನ್ನು ಇವನೂ ಮೇಲಿಂದಮೇಲೆ ಹಿಂದೂಡಬೇಕಾಯಿತು. ಇದಕ್ಕಾಗಿ, ಒಮ್ಮೆ ಅವನ ಇಬ್ಬರೂ ಮಕ್ಕಳು ಸೈನ್ಯಸಮೇತರಾಗಿ ಹೋದರು. ಆದರೆ ಅವರು ವಿಜಯಿಗಳಾಗಿ ಮರಳಿ ಬರುವದರೊಳಗಾಗಿ ರಾಜಧಾನಿಯಲ್ಲಿ ಪ್ರಭಾಕರವರ್ಧನನು ಬೇನೆಯಿಂದ ಮರಣ ಹೊಂದಿದನು. ಅವನ ಹೆಂಡತಿಯು 'ಸಹಗಮನ' ಮಾಡಿದಳು. ಸಾಮಂತ ರಾಜರು ಅಲ್ಲಲ್ಲಿ ಬಂಡಾಯ ಹೂಡಿದರು. ಮಾಳವದ ದೇವಗುಪ್ತನೆಂಬ ರಾಜನೂ ಬಂಗಾಲದ ಶಶಾಂಕನೆಂಬ ರಾಜನೂ ಒಟ್ಟುಗೂಡಿ ಕನೋಜದ ಮೇಲೆ ದಾಳಿಮಾಡಿದರು. ಅಲ್ಲಿ ಗ್ರಹವರ್ಮನನ್ನು ಕೊಂದು ರಾಜ್ಯಶ್ರೀಯನ್ನು ಸೆರೆಯಲ್ಲಿಟ್ಟರು. ಈ ಸುದ್ದಿಯು ಠಾಣೇಶ್ವರದ ರಾಜ್ಯವರ್ಧನನಿಗೆ ತಿಳಿದ ಕೂಡಲೆ, ಅವನು ಸೈನ್ಯಸಮೇತನಾಗಿ ಹೊರಟು ಮಾಳವದ ದೇವಗುಪ್ತನನ್ನು ಕಾಳಗದಲ್ಲಿ ಎದುರಿಸಿ ಸೋಲಿಸಿದನು. ಮಾಳವಾ ಪ್ರಾಂತವು ರಾಜ್ಯವರ್ಧನನ ಕೈವಶವಾಯಿತು. ಬಳಿಕ ಬಂಗಾಲದ ಶಶಾಂಕನನ್ನು ಎದುರಿಸುವಾಗ ಮಾತ್ರ ಅವನ ಮೋಸದಿಂದ ರಾಜ್ಯವರ್ಧನನು ಸಾವಿಗೆ ತುತ್ತಾದನು.

**ಹರ್ಷವರ್ಧನನಿಗೆ ಅರಸೊತ್ತಿಗೆ:—**

ಅಣ್ಣನ ಅನಿರೀಕ್ಷಿತ ಮರಣದಿಂದ ತೆರವಾದ ಠಾಣೇಶ್ವರದ ಪಟ್ಟವನ್ನು ಹರ್ಷನು ಕ್ರಿ. ಶ. ೬೦೬ರಲ್ಲಿ ಏರಿದನು. ಆಗ ಅವನ ವಯಸ್ಸು ೧೬-೧೭ ವರುಷ ಮಾತ್ರವಿತ್ತು. ಆದರೂ ಅವನು ಶೂರನೂ ಪರಾಕ್ರಮಿಯೂ ಇದ್ದನು. ಆಗ ಅವನ ಮುಂದೆ ಮೂರು ಪ್ರಶ್ನೆಗಳಿದ್ದವು. ಅವು ಯಾವವೆಂದರೆ:— ೧) ತಂಗಿಯಾದ ರಾಜ್ಯಶ್ರೀಯನ್ನು ಮರಳಿ ತರುವದು. ೨) ಅಣ್ಣನ ಮರಣಕ್ಕೆ ಕಾರಣನಾದ ಶಶಾಂಕನ ಮೇಲೆ ಸೇಡು ತೀರಿಸಿಕೊಳ್ಳುವದು. ೩) ರಾಜ್ಯದಲ್ಲಿ ಸುವ್ಯವಸ್ಥೆಯನ್ನುಂಟುಮಾಡಿ ಅದನ್ನು ಬೆಳೆಸುವದು.

ಮೊದಲಿಗೆ ಹರ್ಷನು ಕನೋಜದ ಮೇಲೆ ಏರಿಹೋಗಿ ಅದನ್ನು ಕೈವಶ ಮಾಡಿಕೊಂಡನು. ಆಗ ರಾಜ್ಯಶ್ರೀಯು ಸೆರೆಯಿಂದ ಪಾರಾಗಿ ವಿಂಧ್ಯಾಟವಿಯನ್ನು ಸೇರಿದ ಸಂಗತಿಯು ಅವನಿಗೆ ತಿಳಿದುಬಂದಿತು. ಆದ್ದರಿಂದ ಕೂಡಲೆ ಅವನು ಕೆಲವು ಅಂಗರಕ್ಷಕರೊಂದಿಗೆ ಅಲ್ಲಿಗೆ ಹೋಗಿ ಅವಳನ್ನು ಶೋಧಿಸಿದನು. ಜೀವನದಲ್ಲಿ ನಿರಾಶೆಗೊಂಡ ರಾಜ್ಯಶ್ರೀಯು ಆಗ ಅಗ್ನಿಪ್ರವೇಶಕ್ಕಾಗಿ ಚಿತೆಯನ್ನು ರಚಿಸಿ, ಅದರಲ್ಲಿ ಹಾರಿಕೊಳ್ಳುವದರಲ್ಲಿದ್ದಳು! ಈ ಪರಿಸ್ಥಿತಿಯಲ್ಲಿದ್ದ ತಂಗಿಯನ್ನು ಕಂಡಾಕ್ಷಣವೇ, ಹರ್ಷನು ಅವಳನ್ನು ತಡೆದು, ಸಂತೈಸಿ ರಾಜಧಾನಿಗೆ ಮರಳಿ ಕರೆದೊಯ್ದನು ( ಚಿತ್ರ ೧ ನೋಡಿರಿ ). ಅವಳು ಸಂನ್ಯಾಸಿಯಾಗಿ ಸತ್ಕಾರ್ಯಗಳಲ್ಲಿ ತೊಡಗಿದಳು. ರಾಜ್ಯದಾಡಳಿತೆಯಲ್ಲಿ ಕೆಲವು ಸಲ ಅಣ್ಣನಿಗೆ ನೆರವಾದಳು. ಕನೋಜದ ಜನರ ಬಿನ್ನಹದ ಮೇರೆಗೆ ಅದರ ಆಡಳಿತೆಯನ್ನೂ ಹರ್ಷನೇ ವಹಿಸಿದನು. ಅದನ್ನೇ ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡನು. 'ಕಾಮರೂಪ'[೧] ದ ಭಾಸ್ಕರವರ್ಮನೆಂಬ ಅರಸನ ಸಹಾಯದಿಂದ ಶಶಾಂಕನನ್ನು ಹಣ್ಣಿಗೆ ತಂದನು. ಆದರೂ ಅವನು ಕಡೆತನಕ ಹರ್ಷನ ಕಡುವೈರಿಯಾಗಿಯೇ ಉಳಿದನು.

**ಹರ್ಷನ ವಿಜಯಯಾತ್ರೆ** (ರಾಜ್ಯವಿಸ್ತಾರ):—

ಬಾಲಕರೇ, ಮೇಲೆ ಹೇಳಿದಂತೆ ಹರ್ಷನು ತನ್ನ ರಾಜ್ಯದಲ್ಲಿ ಭದ್ರವಾಗಿ ಕಾಲೂರಿ ನಿಂತಬಳಿಕ, ರಾಜ್ಯವಿಸ್ತಾರಕ್ಕೆ ಅಣಿಯಾದನು. ಆರು ವರುಷ

---

೧. ಈಗಿನ 'ಅಸಾಮ'

ಗಳಲ್ಲಿ ಸಿಂಧ, ಕಾಶ್ಮೀರ, ಅಯೋಧ್ಯೆ, ಪ್ರಯಾಗ, ಕಾಶಿ, ಮಗಧ, ಗೌಡ ದೇಶಗಳನ್ನು ಗೆದ್ದನು. ಕಾಠೇವಾಡದಲ್ಲಿಯ ವಲಭೀ ಅರಸನೂ ನೇಪಾಳದ ಅರಸನೂ ಇವನ ಒಡೆತನವನ್ನು ಒಪ್ಪಬೇಕಾಯಿತು. ಬಳಿಕ ದಕ್ಷಿಣಕ್ಕೆ ದಾಳಿ ಮಾಡಲು ದೊಡ್ಡ ಸೈನ್ಯದೊಂದಿಗೆ ಹೊರಟನು. ಆದರೆ ದಕ್ಷಿಣದಲ್ಲಿ ಸಮ್ರಾಟ ನಾದ ಚಾಲುಕ್ಯವಂಶದ ಎರಡನೆಯ ಪುಲಿಕೇಶಿಯು ತನ್ನ ಪ್ರಚಂಡ ಸೈನ್ಯ ದೊಂದಿಗೆ ಇವನನ್ನು ನರ್ಮದಾ ನದಿಯ ದಂಡೆಯಮೇಲೆ ಎದುರಿಸಿದನು. ಹರ್ಷನಿಗೆ ಸೋಲುಂಟಾಯಿತು.[೧] ನರ್ಮದಾ ನದಿಯೆ ತನ್ನ ಸಾಮ್ರಾಜ್ಯದ ದಕ್ಷಿ ಣದ ಮೇರೆಯೆಂದೊಪ್ಪಿ ಹರ್ಷನು ರಾಜಧಾನಿಗೆ ಮರಳಿದನು. ಉತ್ತರ ಭಾರತದ ಬಹುಭಾಗವು ಇವನ ಅಂಕಿತದಲ್ಲಿ ಬಂದಿತು (ಚಿತ್ರ ೨ ನೋಡಿರಿ).

**ರಾಜ್ಯದಾಡಳಿತೆ:—**

ಹರ್ಷನ ಆಳಿಕೆಯಲ್ಲಿ ಚೀನದಿಂದ ಬೌದ್ಧ ಯಾತ್ರಿಕನಾಗಿ ಬಂದ ಹುಯೆನ-ತ್ಸಂಗನು ಅವನ ರಾಜ್ಯದಲ್ಲಿ ೭-೮ ವರುಷವಿದ್ದು ಅವನ ಆಡ ಳಿತೆಯ ವಿವರಗಳನ್ನು ಕೊಟ್ಟಿರುವನು (ವಿವರಣೆಗಾಗಿ ೧೨ನೆಯ ಪ್ರಕರಣ ನೋಡಿರಿ). ಅವನನ್ನು ಸ್ವಾಗತಿಸಲು, ಹರ್ಷನು ಎರಡು ಮಹಾಸಭೆಗಳನ್ನು ನೆರೆಯಿಸಿದನು. ಒಂದು ಕನೋಜದಲ್ಲಿ ನೆರೆಯಿತು; ಮತ್ತೊಂದು ಪ್ರಯಾಗ ದಲ್ಲಿ ನಡೆಯಿತು. ಬೇರೆ ಬೇರೆ ದೇಶಗಳ ರಾಜರು ಮತ್ತು ಬೇರೆಬೇರೆ ಧರ್ಮ ಗಳ ಪಂಡಿತರು ಇವುಗಳಲ್ಲಿ ಭಾಗವಹಿಸಿದರು. ಹುಯೆನ-ತ್ಸಂಗನ ಹೇಳಿ ಕೆಯ ಮೇರೆಗೆ, ಹರ್ಷನ ರಾಜ್ಯದಲ್ಲಿ ಸುವ್ಯವಸ್ಥೆ, ಜನರಲ್ಲಿ ಸುಖ-ಸಮಾಧಾನ ಗಳು ಇದ್ದುದು ತಿಳಿದುಬರುತ್ತದೆ. ಒಕ್ಕಲಿಗರೆ ಮೊದಲಾದವರು ತಮ್ಮ ತಮ್ಮ ಕಸಬುಗಳಲ್ಲಿ ತೊಡಗಿರುತ್ತಿದ್ದರು. ಅಪರಾಧಗಳು ಕಡಿಮೆಯಿದ್ದವು. ಪ್ರಾಣಿಹಿಂಸೆಯನ್ನು ನಿಲ್ಲಿಸಲಾಗಿತ್ತು.

**ಸಾಹಿತ್ಯ:—**

ಹರ್ಷನು ಸ್ವತಃ 'ಕವಿ' ಯಾಗಿದ್ದನಲ್ಲದೆ, ವಿದ್ಯಾವಂತರಿಗೂ ಕಲಾ ವಿದರಿಗೂ ಆಶ್ರಯ ಕೊಟ್ಟನು. 'ರತ್ನಾವಲಿ' ಮುಂತಾದ ಕೆಲವು ನಾಟಕ ಗಳು ಸಂಸ್ಕೃತ ಭಾಷೆಯಲ್ಲಿ ಅವನಿಂದ ರಚಿತವಾದವು. ಅವನ ಆಸ್ಥಾನ

---

೧. ಕಾಳಗದ ಖಂಡಿತವಾದ ಇಸವಿಯು ತಿಳಿದುಬಂದಿಲ್ಲ.

ದಲ್ಲಿದ್ದ ಬಾಣನೆಂಬ ಕವಿಯು ಸಂಸ್ಕೃತದಲ್ಲಿ ‘ಕಾದಂಬರಿ’ ಯೆಂಬ ಸುರಸ ಕತೆಯನ್ನು ಬರೆದನು. ಅವನ ‘ಹರ್ಷಚರಿತ್ರೆ’ ಯೆಂಬ ಗ್ರಂಥದಿಂದ ಹರ್ಷನ ಜೀವನ ಚರಿತ್ರೆಯು ತಿಳಿದುಬರುವದು. ಹರ್ಷನು ವಿಹಾರಗಳನ್ನು ಕಟ್ಟಿಸಿದನು; ಮೂರ್ತಿಗಳನ್ನು ನಿರ್ಮಿಸಿದನು; ನಾಲಂದಾ ವಿಶ್ವವಿದ್ಯಾಲಯಕ್ಕೆ ಸಹಾಯ ಸಲ್ಲಿಸಿದನು.

**ಧರ್ಮ :—**

ಸೂರ್ಯನು ಹರ್ಷನ ಆರಾಧ್ಯದೇವತೆ. ಇವನು ಶಿವಭಕ್ತನೂ ಅಹುದು. ಆದರೆ ಕಾಲಗತಿಯಲ್ಲಿ ಇವನು ಬೌದ್ಧ ಧರ್ಮವನ್ನೇ ನಂಬಿದನು. ಪರಧರ್ಮ ಸಹಿಷ್ಣುತೆಯೂ ಇವನ ಸದ್ಗುಣಗಳಲ್ಲಿ ಒಂದು. ಇವನು ಐದು ವರುಷಗಳಿಗೊಮ್ಮೆ ಧರ್ಮೋತ್ಸವವನ್ನು ಜರುಗಿಸುತ್ತಿದ್ದನು. ಇಂಥ ಉತ್ಸವಗಳಲ್ಲಿ ತನ್ನ ಬೊಕ್ಕಸದಲ್ಲಿ ಕೂಡಿಬಿದ್ದ ಹಣವನ್ನೆಲ್ಲ ಬೌದ್ಧ, ಜೈನ ಮತ್ತು ವೈದಿಕ ಧರ್ಮಗಳ ಯತಿಗಳಿಗೆ ದಾನರೂಪದಿಂದ ಹಂಚಿಬಿಡುತ್ತಿದ್ದನು. ಒಮ್ಮೆಯಂತೂ, ತನ್ನ ಮೈಮೇಲಿನ ವಸ್ತ್ರಗಳನ್ನೂ ದಾನಮಾಡಿ, ತಂಗಿಯಾದ ರಾಜ್ಯಶ್ರೀಯಿಂದ ಕ್ಯಾವಿ ಬಣ್ಣದ ಅರ್ಧವಸ್ತ್ರವನ್ನು ಭಿಕ್ಷೆಬೇಡಿ ಉಟ್ಟುಕೊಂಡನಂತೆ! ಇದರಿಂದ ಅವನಲ್ಲಿಯ ಅದ್ವಿತೀಯ ತ್ಯಾಗಬುದ್ಧಿಯು ಕಂಡುಬರುವದು. ಅವನ ದಾನಧರ್ಮಗಳಲ್ಲಿ ಮಿಗಿಲಾದ ಸಮತೂಕವಿತ್ತು. ಅವನು ನೆರೆಯಿಸುತ್ತಿದ್ದ ಮಹಾಸಭೆಗಳಲ್ಲಿ ಅನುಕ್ರಮವಾಗಿ ಬುದ್ಧ, ಶಿವ ಮತ್ತು ಸೂರ್ಯಮೂರ್ತಿಗಳ ಪೂಜೆಗಳೂ ಮೆರವಣಿಗೆಗಳೂ ನಡೆಯುತ್ತಿದ್ದವು.

**ಮರಣ ಮತ್ತು ಯೋಗ್ಯತೆ :—**

ಹರ್ಷನು ಕ್ರಿ. ಶ. ೬೪೭ ರಲ್ಲಿ ಪರಲೋಕವಾಸಿಯಾದನು. ಪ್ರಾಚೀನ ಭಾರತದ ಶ್ರೇಷ್ಠ ಸಮ್ರಾಟರಲ್ಲಿ ಇವನೇ ಕೊನೆಯವನು.

**೨. ಚಾಲುಕ್ಯವಂಶದ ೨ನೆಯ ಪುಲಿಕೇಶಿ :—** ( ಕ್ರಿ. ಶ. ೬೦೯ರಿಂದ ೬೪೨ರ ವರೆಗೆ ).

ಉತ್ತರಭಾರತದಲ್ಲಿ ಹರ್ಷ ಸಮ್ರಾಟನು ರಾಜ್ಯಭಾರ ಮಾಡುತ್ತಿದ್ದಾಗ ದಕ್ಷಿಣದಲ್ಲಿ ಚಾಲುಕ್ಯವಂಶದ ೨ನೆಯ ಪುಲಿಕೇಶಿಯು ಸಮ್ರಾಟನೆಂದು ಹೆಸರಾಗಿದ್ದನು. ಇವನಾದರೂ ಹರ್ಷನನಷ್ಟೇ ಬಲಿಷ್ಠನಿದ್ದನು.

**ಪೂರ್ವೇತಿಹಾಸ :—**

ಚಾಲುಕ್ಯಮನೆತನದ ಮೂಲಪುರುಷನು ಜಯಸಿಂಹನೆಂಬವನು. ಅವನ ಮಗನಾದ ೧ನೆಯ ಪುಲಿಕೇಶಿಯು ವಾತಾಪಿಪುರ ( ಈಗಿನ ಬಾದಾಮಿ )[೧] ಎಂಬಲ್ಲಿ ಬಂದು ರಾಜ್ಯಕಟ್ಟಿಕೊಂಡನು. ಇವನ ಮಕ್ಕಳಾದ ಕೀರ್ತಿವರ್ಮ ಮತ್ತು ಮಂಗಳೇಶ ಎಂಬವರು ತಂದೆಯ ರಾಜ್ಯವನ್ನು ವಿಸ್ತಾರ ಮಾಡುತ್ತ, ಕೊಂಕಣ, ಬನವಾಸಿ, ಮಾಳವ ಮುಂತಾದ ಪ್ರಾಂತಗಳನ್ನು ಗೆದ್ದರು. ತಂದೆಯನಂತರ ಕೀರ್ತಿವರ್ಮನು ಪಟ್ಟವೇರಿದನು. ಇವನು ಪೂರ್ವ ಕರಾವಳಿಯಿಂದ ಬಂಗಾಲದ ವರೆಗೆ ದಂಡಯಾತ್ರೆಯನ್ನು ಕೈಕೊಂಡನಂತೆ. ಅಂಗ, ವಂಗ, ಕಲಿಂಗ ಅರಸರನ್ನು ಗೆದ್ದನಲ್ಲದೆ, ದಕ್ಷಿಣದಲ್ಲಿಯ ಗಂಗ, ದ್ರಾವಿಡ, ಚೋಳ, ಪಾಂಡ್ಯರನ್ನೂ ತನ್ನ ಅಂಕಿತದಲ್ಲಿಟ್ಟುಕೊಂಡನು. ಮರಣ ಸಮಯದಲ್ಲಿ ತನ್ನ ಹಿರಿಯ ಮಗನಾದ ಪುಲಿಕೇಶಿಯು ಚಿಕ್ಕವನಿದ್ದುದರಿಂದ ರಾಜ್ಯಭಾರದ ಹೊಣೆಯನ್ನು ತಮ್ಮನಾದ ಮಂಗಳೇಶನಿಗೆ ಒಪ್ಪಿಸಿದನು. ಇವನು ಕ್ರಿ. ಶ. ೫೯೭ ರಿಂದ ೬೦೮ರ ವರೆಗೆ ರಾಜ್ಯಸೂತ್ರವನ್ನು ವಹಿಸಿ ತನ್ನ ಪ್ರತಿಷ್ಠೆಯನ್ನು ಬೆಳೆಸಿದನು. ಶಿಲ್ಪಕಲೆಯಲ್ಲಿ ಪ್ರೀತಿಯುಳ್ಳವನಾಗಿದ್ದರಿಂದ ಬಾದಾಮಿಯಲ್ಲಿ ವಿಷ್ಣುವಿನ ಗುಡಿಯನ್ನು ಕೊರೆಯಿಸಿದನು.

**೨ನೆಯ ಪುಲಿಕೇಶಿಯ ಅರಸೊತ್ತಿಗೆ :—**

ಬರಬರುತ್ತ ತನ್ನ ಸಂತತಿಗೇ ಪಟ್ಟ ದೊರೆಯಬೇಕೆಂದು ಮಂಗಳೇಶನು ಹವಣಿಸಿದನು. ಆದ್ದರಿಂದ ಇವನಿಗೂ ೨ನೆಯ ಪುಲಿಕೇಶಿಗೂ ವೈಮನಸ್ಸುಂಟಾಗಿ ಕಾಳಗವೆಸಗಿತು. ಇದರಲ್ಲಿ ಮಂಗಳೇಶನು ಮಡಿದನು. ಕ್ರಿ. ಶ. ೬೦೯ರಲ್ಲಿ ಎರಡನೆಯ ಪುಲಿಕೇಶಿಯು ಪಟ್ಟವೇರಿದನು.

**ರಾಜ್ಯಭಾರ :—**

ಎರಡನೆಯ ಪುಲಿಕೇಶಿಯು ಬಾದಾಮಿಯಲ್ಲಿ ಪಟ್ಟವೇರಿದಾಗ, ರಾಜ್ಯದಲ್ಲಿಯ ಮಾಂಡಲಿಕರು ಅಲ್ಲಲ್ಲಿ ಸ್ವತಂತ್ರರಾಗಲು ಹವಣಿಸಿದರು. ಮೊದಲು ಪುಲಿಕೇಶಿಯು ಅವರನ್ನು ಸದೆಬಡಿದನು. ಬಳಿಕ ಲಾಟ, ಮಾಳವಾ, ಕೋಸಲ

---

೧. ಇದು ವಿಜಾಪುರ ಜಿಲ್ಲೆಯ ಒಂದು ಭಾಗ.

ಕಳಿಂಗ, ಕದಂಬ, ಗಂಗ, ಚೋಳ, ಚೇರ, ಪಾಂಡ್ಯರನ್ನು ಬಗ್ಗುಬಡಿದನು. ಪಲ್ಲವರ ರಾಜನಾದ ಮಹೇಂದ್ರವರ್ಮನ ಮೇಲೆ ಏರಿಹೋಗಿ ಅವನ ರಾಜಧಾನಿಯಾದ ಕಂಚಿಯನ್ನು ವಶಪಡಿಸಿಕೊಂಡನು. ಇವನಿಂದ ವೆಂಗಿ ಪ್ರಾಂತವನ್ನು ಕಿತ್ತುಕೊಂಡು ಅಲ್ಲಿ ತನ್ನ ತಮ್ಮನಾದ ವಿಷ್ಣುವರ್ಧನನನ್ನು ಸ್ಥಾಪಿಸಿದನು. ಉತ್ತರದ ಹರ್ಷ ಚಕ್ರವರ್ತಿಯು ತನ್ನ ಸಾಮ್ರಾಜ್ಯವನ್ನು ಬೆಳೆಸಲು ದಕ್ಷಿಣಕ್ಕೆ ಸೈನ್ಯದೊಡನೆ ಬರಲು ಹವಣಿಸಿದಾಗ, ೨ನೆಯ ಪುಲಿಕೇಶಿಯು ಅವನನ್ನು ನರ್ಮದೆಯ ದಂಡೆಯಮೇಲೆ ಎದುರಿಸಿ ಹಿಂದಿರುಗುವಂತೆ ಮಾಡಿದನು. ಈ ರೀತಿಯಲ್ಲಿ ನಾಡಿನ ಹೊರಗೂ ಒಳಗೂ ತನ್ನ ಪ್ರಭಾವವನ್ನು ಬೀರಿ, ಇವನು 'ಪರಮೇಶ್ವರ' ಎಂಬ ಬಿರುದನ್ನು ಧರಿಸಿದನು. ಇವನ ಖ್ಯಾತಿಯು ಇರಾಣದ ವರೆಗೆ ಹಬ್ಬಿತು. ಆದ್ದರಿಂದಲೆ ಅಲ್ಲಿಯ ಅರಸನಾದ 'ಖುಸ್ರು'ವು ಇವನಲ್ಲಿಗೆ ತನ್ನ ರಾಯಭಾರಿಯನ್ನು ಕಳುಹಿದನು. ಇವನ ಸ್ನೇಹಸಂಪಾದನೆಗಾಗಿ ಪ್ರಯತ್ನಿಸಿದನು.

ಚೀನದ ಹುಯೆನ-ತ್ಸಂಗನು ಭಾರತದ ಪ್ರವಾಸದಲ್ಲಿ ಬಾದಾಮಿಗೂ ಭೆಟ್ಟಿಕೊಟ್ಟನು. ಚಾಲುಕ್ಯರಾಜ್ಯದ ವಿವರಗಳನ್ನೂ ಇವನು ಬರೆದಿಟ್ಟಿರುವನು. ಪುಲಿಕೇಶಿಯ ರಾಜ್ಯವನ್ನು ಮಹಾರಾಷ್ಟ್ರವೆಂದು ಕರೆದಿರುವನು. ಅರಸನನ್ನೂ ಪ್ರಜೆಗಳನ್ನೂ ವಿಶೇಷವಾಗಿ ಹೊಗಳಿರುವನು. ರಾಜ್ಯದಲ್ಲಿ ೧೦೦ ವಿಹಾರಗಳನ್ನೂ ಹೀನಯಾನ ಮತ್ತು ಮಹಾಯಾನ ಪಂಥಗಳಿಗೆ ಸೇರಿದ ೫೦೦೦ ಬೌದ್ಧ ಭಿಕ್ಷುಗಳನ್ನೂ ಇವನು ಸಂದರ್ಶಿಸಿದನಂತೆ.

**ಮರಣ :—**

ಇಷ್ಟು ಪ್ರಖ್ಯಾತನಾದ ೨ನೆಯ ಪುಲಿಕೇಶಿಯ ರಾಜಧಾನಿಯನ್ನು ನರಸಿಂಹವರ್ಮ[೧] ನೆಂಬ ಕಂಚಿಯ ಪಲ್ಲವರಾಜನು ಮುತ್ತಿದನು (ಕ್ರಿ. ಶ. ೬೪೨ರಲ್ಲಿ). ಕಾಳಗದಲ್ಲಿ ಪುಲಿಕೇಶಿಯು ಹೇಗೋ ಮಾಯವಾದನು. ಮುಂದೆ ಐದಾರು ತಲೆಮಾರುಗಳನಂತರ, ಚಾಲುಕ್ಯರ ರಾಜ್ಯವು 'ರಾಷ್ಟ್ರಕೂಟ'ರೆಂಬ ಅರಸುಮನೆತನದವರ ಕೈಸೇರಿತು. ಚಾಲುಕ್ಯಮನೆತನದ ಅರಸರು ಶಿಲ್ಪಕಲೆಗೆ ಹೆಚ್ಚಾಗಿ ಉತ್ತೇಜನ ಕೊಟ್ಟರು. ಬಾದಾಮಿಯ ಗುಡ್ಡಗಳಲ್ಲಿ ಗುಹೆಗಳನ್ನು ಕೊರೆಯಿಸಿದರು (ಚಿತ್ರ ೩ ನೋಡಿರಿ).

೧. ಇವನು ಕಂಚಿಯ ಮಹೇಂದ್ರವರ್ಮನ ಮಗನು.

## ೩. ರಾಜೇಂದ್ರ ಚೋಳ :—

ಪೂರ್ವೇತಿಹಾಸ :— ಅತಿ ಪ್ರಾಚೀನ ಕಾಲದಿಂದಲೂ ದ್ರವಿಡರು ದಕ್ಷಿಣ ಭಾರತದ ಮೂಲನಿವಾಸಿಗಳು. ಅದರಲ್ಲಿಯು ಈಗಿನ ಮಲಬಾರದಲ್ಲಿ ಚೇರರೂ ಮಧುರೆ–ರಾಮೇಶ್ವರಗಳ ನಡುವಿನ ಪ್ರದೇಶಗಳಲ್ಲಿ ಪಾಂಡ್ಯರೂ ಕಾವೇರೀ ನದಿಯ ಪ್ರದೇಶದಲ್ಲಿ ಚೋಳರೂ ರಾಜ್ಯಗಳನ್ನು ಕಟ್ಟಿಕೊಂಡರು. ಚೋಳರು ಮೇಲಾದ ನಾವಿಕರೆನಿಸಿ ಬಹು ದೂರದ ದೇಶಗಳೊಂದಿಗೆ ವ್ಯಾಪಾರ ಮಾಡಿದರು. ಚೋಳರಾಜ್ಯವು ಕ್ರಿ. ಶ. ೯ನೆಯ ಶತಮಾನದಲ್ಲಿ ತಲೆಯೆತ್ತಿ ಬೆಳೆದಿತು. ಈ ಮನೆತನದ ಮೂಲಪುರುಷನು ಆದಿತ್ಯಚೋಳ. ಈಗಿನ ತಂಜಾವರವೆ ಚೋಳ ಅರಸರ ರಾಜಧಾನಿಯಾಗಿತ್ತು. ಆದಿತ್ಯ ಚೋಳನ ವಂಶದಲ್ಲಿ ರಾಜರಾಜ ಮತ್ತು ಅವನ ಮಗ ರಾಜೇಂದ್ರರೆಂಬ ವರು ಬಹಳ ಪ್ರಸಿದ್ಧ ಅರಸರಾಗಿ ಹೋದರು. ರಾಜರಾಜನು ಕ್ರಿ. ಶ. ೯೮೫ರಲ್ಲಿ ಪಟ್ಟವೇರಿದನು. ಇವನ ಆಳಿಕೆಯಲ್ಲಿ ಚೋಳರಾಜ್ಯವು ಸಾಮ್ರಾಜ್ಯ ಪದಕ್ಕೆ ಮುಟ್ಟಿತು. ಒಟ್ಟಿನಲ್ಲಿ, ಬಹುತರ ಈಗಿನ ದಕ್ಷಿಣ ಭಾರತವೆಲ್ಲ ಇವನ ಆಧಿಪತ್ಯಕ್ಕೆ ಒಳಪಟ್ಟಿತಂತೆ. ಕಲಿಂಗದೇಶವನ್ನೂ ಇವನು ಗೆದ್ದನು. ಇವನಲ್ಲಿ ಬಲವಾದ ಹಡಗುಪಡೆಯಿತ್ತು. ಇವನಿಂದ ಹಿಂದೀ ದ್ವೀಪಸಮುದಾಯದ ಆಕ್ರಮಣವು ನಡೆಯಿತು. ಇವನು ತಂಜಾವರದಲ್ಲಿ ರಾಜರಾಜೇಶ್ವರ ಎಂಬ ಶಿವಾಲಯವನ್ನು ಕಟ್ಟಿಸಿದನು. ಕ್ರಿ. ಶ. ೧೦೧೨ ರಲ್ಲಿ ಇವನು ಮರಣ ಹೊಂದಿದನು.

**೧ನೆಯ ರಾಜೇಂದ್ರ** (ಕ್ರಿ. ಶ. ೧೦೧೨ ರಿಂದ ೧೦೪೨ ರ ವರೆಗೆ):—

**ಅರಸೊತ್ತಿಗೆ**:— ಇವನು ರಾಜರಾಜನ ಮಗ. ತಂದೆಯ ಮರಣದ ನಂತರ ಕ್ರಿ. ಶ. ೧೦೧೨ ರಲ್ಲಿ ಚೋಳರಾಜ್ಯದ ಪಟ್ಟವೇರಿದನು. ದಕ್ಷಿಣ ಭಾರತದಲ್ಲಿ ಆಳಿದ ಪ್ರಖ್ಯಾತ ಅರಸರಲ್ಲಿ ಇವನ ಗಣನೆಯಾಗುತ್ತದೆ. ಸಾರ್ವಭೌಮನೆಂದೆನಿಸಿ ಇವನು ಬಹಳ ವೈಭವದಿಂದ ರಾಜ್ಯವಾಳಿದನು. ರಾಜ್ಯವಿಸ್ತಾರಕ್ಕಾಗಿ ಬಹುತರ ಇಡೀ ದಕ್ಷಿಣಭಾರತವನ್ನು ವಶಪಡಿಸಿ

ಕೊಂಡನಲ್ಲದೆ, ಓರಿಸಾ, ಬಂಗಾಲ ಪ್ರಾಂತಗಳ ವರೆಗೂ ದಾಳಿಯಿಟ್ಟನು.[೧] ಬ್ರಹ್ಮದೇಶದ ಪೇಗೂ ಪ್ರಾಂತ ಮತ್ತು ಮಲಯದ ನೆರೆಯಲ್ಲಿಯ ನಡು ಗಡ್ಡೆಗಳೂ ಇವನ ವಶಕ್ಕೆ ಬಂದವು. ಸಿಂಹಳದ್ವೀಪವು ಇವನ ಪ್ರಭಾವ ಕ್ಕೊಳಪಟ್ಟಿತು. ಆಗಿನ ಕಾಲಕ್ಕೆ ಭಾರತದ ಅತಿ ಪೂರ್ವದಲ್ಲಿದ್ದ 'ಕೊಟ್ಟಾ' ಎಂಬ ರಾಜ್ಯವನ್ನು ಜಾವಾದ ಶೈಲೇಂದ್ರ ರಾಜನಿಂದ ಕಿತ್ತುಕೊಂಡನು (ಚಿತ್ರ ೪ ನೋಡಿರಿ). ಗಂಗಾನದಿಯ ವರೆಗೆ ದಂಡೆತ್ತಿ ಹೋದದ್ದರಿಂದ ಇವನಿಗೆ 'ಗಂಗೈಕೊಂಡ' ಎಂಬ ಬಿರುದು ದೊರೆಯಿತು. ಇವನು ಬೇರೊಂದು ರಾಜಧಾನಿಯನ್ನು ಕಟ್ಟಿ ಅದಕ್ಕೆ ಗಂಗೈಕೊಂಡ ಚೋಳ ಪುರವೆಂದು[೨] ಹೆಸರಿಟ್ಟನು. ಕ್ರಿ. ಶ. ೧೦೪೨ ರಲ್ಲಿ ಇವನು ಮರಣಹೊಂದಿ ದನು. ಇವನ ಅನಂತರವೂ ಈ ಮನೆತನದಲ್ಲಿ ಕೆಲವು ಪ್ರಸಿದ್ಧ ಅರಸರು ಆಳಿದರು. ಕ್ರಿ. ಶ. ೧೨೧೬ ರಲ್ಲಿ ಈ ರಾಜ್ಯದ ಅವನತಿಯು ಪ್ರಾರಂಭ ವಾದರೂ ಇದು ಕ್ರಿ. ಶ. ೧೨೭೦ರ ವರೆಗೆ ತಲೆಯೆತ್ತಿ ನಿಂತಿತ್ತು.

ಆಡಳಿತೆಯ ಮೂಲ ಘಟಕವು ಗ್ರಾಮವಾಗಿದ್ದಿತು. ಇಲ್ಲಿ ಒಂದು 'ಪಂಚಾಯತಿ' ಇದ್ದು ಭೂಮಿಯ ಒಡೆತನವೆಲ್ಲ ಇದಕ್ಕೆ ಸೇರಿದ್ದಿತು. ಇದು ನೀರಾವರಿ ಯೋಜನೆ, ನ್ಯಾಯದಾನ ಮುಂತಾದವುಗಳನ್ನು ನೋಡಿಕೊಂಡಿತು. 'ಕುರಂ' 'ಕೊಟ್ಟಂ' 'ನಾಡು' ಇವು ರಾಜ್ಯದ ಇತರ ಘಟಕಗಳು. ಒಕ್ಕಲಿ ಗನು ಹೊಲದ ಆದಾಯದ ⅓ ಭಾಗವನ್ನು ಕಂದಾಯದ ರೂಪದಿಂದ ಅರಸನಿಗೆ ಸಲ್ಲಿಸುತ್ತಿದ್ದನು. ಅಲ್ಲಿಯ ನಾಣ್ಯಗಳಲ್ಲಿ 'ಕಾಸು' ಎಂಬುವದು ತೀರ ಕಡಿಮೆ ಬೆಲೆಯುದಿತ್ತು. ವಾಸ್ತುಶಿಲ್ಪ ಮತ್ತು ಶಿಲ್ಪಕಲೆಗಳಲ್ಲಿ ಚೋಳ ಅರಸರು ಬಹಳ ಪ್ರಖ್ಯಾತಿಯನ್ನು ಪಡೆದರು. ಇವರು ಕಟ್ಟಿದ ಕಟ್ಟಡಗಳು (ಗುಡಿ ಗೋಪುರಗಳು) ಭವ್ಯಾಕೃತಿಯುಳ್ಳವು. ಆದರೆ ಇವುಗಳಲ್ಲಿಯ ಕೆತ್ತನೆಯ ಕೆಲಸವು ಅತಿ ಸೂಕ್ಷ್ಮವಾದುದು. ಇವರು ಶಿವಪೂಜಕರಾದ್ದರಿಂದ ಹೆಚ್ಚಾಗಿ

೧. ಕ್ರಿ. ಶ. ೧೦೨೩ ರಲ್ಲಿ.

೨. ಇದು ಈಗಿನ ತ್ರಿಚನಾಪಲ್ಲಿ ಜಿಲ್ಲೆಯಲ್ಲಿದೆ. ಈ ಹೊಸ ರಾಜಧಾನಿಯಲ್ಲಿ ಒಂದು ಭವ್ಯವಾದ ಅರಮನೆ ಮತ್ತು ಒಂದು ವಿಶಾಲವಾದ ಸರೋವರವನ್ನು ಕಟ್ಟಿಸಿದನು.

ಶಿವಾಲಯಗಳನ್ನೇ ಕಟ್ಟಿದರು. ತಂಜಾವರದಲ್ಲಿಯ ರಾಜೇಶ್ವರ ಗುಡಿಯು ಇಂದಿಗೂ ಪ್ರಸಿದ್ಧವಿದೆ.

## ಅಭ್ಯಸನಗಳು.

೧. ಹರ್ಷನ ದೊಡ್ಡಸ್ತಿಕೆಯ ಕೆಲವು ಉದಾಹರಣೆಗಳನ್ನು ಕೊಡಿರಿ.
೨. ಭಾರತದ ಬಾಹ್ಯರೇಷೆಯ ನಕಾಶದಲ್ಲಿ, ೨ನೆಯ ಪುಲಿಕೇಶಿಯು ಗೆದ್ದ ರಾಜ್ಯಗಳನ್ನು ಗುರುತಿಸಿರಿ.
೩. ರಾಜೇಂದ್ರಚೋಳನ ಆಡಳಿತೆಯ ಕೆಲವು ಮುಖ್ಯ ವಿವರಗಳನ್ನು ಹೇಳಿರಿ.

## ೧೪ನೆಯ ಪ್ರಕರಣ



ಚಿತ್ರ ೧. ಮೊಸಳೆಯು ಹಿಡಿದ ಶಂಕರನು (ಶಂಕರಾಚಾರ್ಯರು.)



ಚಿತ್ರ ೨.  ಶಂಕರಾಚಾರ್ಯರು ಮತ್ತು ಅವರ ಶಿಷ್ಯರು.

# ೧೪ನೆಯ ಪ್ರಕರಣ

---

## ಶಂಕರಾಚಾರ್ಯರು (ಕ್ರಿ. ೭೮೮–೮೨೦)

ಶಂಕರಾಚಾರ್ಯರು ಗುಪ್ತವಂಶದ ಅರಸರ ಆಳಿಕೆಯ ಅನಂತರ ಭಾರತದಲ್ಲಿ ಹಿಂದು (ವೈದಿಕ) ಧರ್ಮದ ಪುನರುಜ್ಜೀವನವನ್ನು ಮಾಡಿ ಬಹು ಪ್ರಸಿದ್ಧಿಗೆ ಬಂದರು.

**ಜನನ ಮತ್ತು ಬಾಲ್ಯ:—**

ಇವರು ಕ್ರಿ. ಶ. ೭೮೮ ರಲ್ಲಿ ಕೇರಳ ಪ್ರಾಂತ (ಮಲಬಾರ)ದ ಕಾಲಟೀ ಗ್ರಾಮದಲ್ಲಿ ನಂಬುದ್ರಿಬ್ರಾಹ್ಮಣ ಮನೆತನದಲ್ಲಿ ಜನಿಸಿದರು. ವಿದ್ಯಾಧಿರಾಜನೆಂಬ ಇವರ ಅಜ್ಜನೂ ಶಿವಗುರುವೆಂಬ ಇವರ ತಂದೆಯೂ ಆಗಿನ ಕಾಲದಲ್ಲಿ ಸುಪ್ರಸಿದ್ಧ ಪಂಡಿತರೆನಿಸಿದರು. ಶಂಕರಾಚಾರ್ಯರ ತಾಯಿಯ ಹೆಸರು ಸತೀದೇವಿ. ಆರ್ಯಾಂಬೆಯೆಂದೂ ಇವಳನ್ನು ಕರೆಯಲಾಗುತ್ತಿತ್ತು. ಶಂಕರನು ಮೂರು ವರುಷದವನಿರುವಾಗಲೆ ಅವನ ತಂದೆಯಾದ ಶಿವಗುರು ಮರಣಹೊಂದಿದನು. ಅಂದಿನಿಂದ ತಾಯಿಯೇ ಇವನನ್ನು ಜೋಪಾನಮಾಡಿದಳು. ಅತಿ ಚಿಕ್ಕ ವಯಸ್ಸಿನಲ್ಲಿಯೆ ಶಂಕರನು ಅಗಾಧ ಬುದ್ಧಿ–ಸಾಮರ್ಥ್ಯವನ್ನು ತೋರಿಸಿದನು. ಮಗನಿಗೆ ಐದು ವರುಷಗಳು ತುಂಬಿದ ಕೂಡಲೆ, ಸತೀದೇವಿಯು ಅವನ 'ಉಪನಯನ' ವನ್ನು ಮಾಡಿದಳು. ಅವನು ಚಿಕ್ಕವನಿರುವಾಗಲೆ ತನ್ನ ವಿದ್ಯಾಭ್ಯಾಸವನ್ನು ಪೂರ್ತಿಗೊಳಿಸಿದನು; ವಿದ್ವಾಂಸರಲ್ಲಿ ಅಗ್ರಗಣ್ಯನೆನಿಸಿದನು. ಆ ಚಿಕ್ಕವಯಸ್ಸಿನಲ್ಲಿಯೆ ಅವನ ಮದುವೆಯನ್ನು ಮಾಡಬೇಕೆಂದು ತಾಯಿಯ ಹಂಬಲವಿತ್ತು. ಆದರೆ ಇದಕ್ಕೆ ಶಂಕರನ ಒಪ್ಪಿಗೆ ಇರಲಿಲ್ಲ. ಆಗಲೆ ನೇರವಾಗಿ ಸಂನ್ಯಾಸಾಶ್ರಮವನ್ನು ಸ್ವೀಕರಿಸಬೇಕೆಂದು ಅವನ ಮನದಾಶೆಯಿತ್ತು. ಆದರೆ ಅದಕ್ಕಾಗಿ ತಾಯಿಯಿಂದ ಅಪ್ಪಣೆ ದೊರೆಯುವದು ಶಂಕರನಿಗೆ ಅಸಾಧ್ಯವೆನಿಸಿತು. ಈ ಪರಿಸ್ಥಿತಿಯಲ್ಲಿ ಒಮ್ಮೆ ತಾಯಿಮಕ್ಕಳಿಬ್ಬರೂ ಸ್ನಾನಕ್ಕಾಗಿ ನದಿಗೆ ಹೋದಾಗ ನೀರಿನಲ್ಲಿಯ ಮೊಸಳೆಯೊಂದು ಶಂಕರನ ಕಾಲನ್ನು ಬಲವಾಗಿ ಹಿಡಿಯಿತಂತೆ. ಸಂನ್ಯಾಸಿಯಾಗ

ಲಿಕ್ಕೆ ತಾಯಿಯ ಒಪ್ಪಿಗೆಯನ್ನು ಪಡೆಯಲು ಅದೇ ಸುಸಂಧಿಯೆಂದು ಶಂಕರನು ಯೋಚಿಸಿ ಅವಳಿಗೆ ಹೀಗೆಂದನು, "ಅಮ್ಮಾ, ಮೊಸಳೆಯು ನನ್ನನ್ನು ಬಲವಾಗಿ ಎಳೆಯುತ್ತಿದೆ. ನಾನು ಸಾಯುವೆನು. ನಾನು ಸಂನ್ಯಾಸಿಯಾದರೆ ಮಾತ್ರ ಅದು ನನ್ನನ್ನು ಬಿಡುವದು. ಆದ್ದರಿಂದ ಬೇಗನೆ ಅಪ್ಪಣೆಕೊಡು" (ಚಿತ್ರ ೧ ನೋಡಿರಿ). ಇದನ್ನು ಕೇಳಿ ಗಾಬರಿಗೊಂಡ ತಾಯಿಯು, ಹೇಗಾದರೂ ತನ್ನ ಮಗನು ಬದುಕಿದರೆ ಸಾಕೆಂದು ಅವನಿಗೆ ಸಮ್ಮತಿಯನ್ನು ಕೊಟ್ಟಳು. ಕೂಡಲೆ ಶಂಕರನು ಮನಸ್ಸಿನಲ್ಲಿಯೆ ಸಂನ್ಯಾಸಗ್ರಹಣ ಮಾಡಿದನು.[೧] ಆದರೂ ಗುರುವಿನಿಂದ ಸಂನ್ಯಾಸದೀಕ್ಷೆಯನ್ನು ಪಡೆಯಲು ಮನೆ ಬಿಟ್ಟು ಹೊರಡಬೇಕೆಂದು ನಿರ್ಧಾರ ಮಾಡಿದನು. ಆದರೆ ಹೊರಡುವ ಮುಂಚೆ, ದುಃಖಪಡುತ್ತಿದ್ದ ತಾಯಿಯನ್ನು ಪರಿಪರಿಯಿಂದ ಸಂತೈಸಿ ಆಕೆಯನ್ನು ಸಂರಕ್ಷಿಸುವ ಹೊಣೆಯನ್ನು ತನ್ನ ಬಾಂಧವರಿಗೆ ಒಪ್ಪಿಸಿದನು.

**ಸಂನ್ಯಾಸದೀಕ್ಷೆ:—**

ಮೇಲೆ ಹೇಳಿದಂತೆ, ಶಂಕರನು ಕೇರಳ ದೇಶದಿಂದ ಹೊರಟು ಉತ್ತರಕ್ಕೆ ಸಾಗುತ್ತ ನರ್ಮದಾನದಿಯ ದಂಡೆಗೆ ತಲುಪಿದನು. ಅಲ್ಲಿಯ ಅರಣ್ಯದಲ್ಲಿ ಗೋವಿಂದನಾಥ (ಗೋವಿಂದಪಾದಾಚಾರ್ಯ) ರೆಂಬ ಯತಿಗಳ ವಿದ್ಯಾಪೀಠವನ್ನು ಕಂಡನು. ಶಂಕರನು ಅವರ ಬಳಿಯಲ್ಲಿದ್ದು ಅವರಿಂದ ಸಂನ್ಯಾಸದೀಕ್ಷೆಯನ್ನು ವಿಧಿಪ್ರಕಾರವಾಗಿ ಪಡೆದನು. ಗೋವಿಂದಯತಿಗಳೆ ಇವನಿಗೆ ಜಗದ್ಗುರು ಎಂದು ಹೆಸರು ಕೊಟ್ಟರೆಂದು ಹೇಳಲಾಗುತ್ತದೆ. ವೈದಿಕ ಧರ್ಮದ ಪುನರುಜ್ಜೀವನಕ್ಕಾಗಿ ಅವರು ಇವನನ್ನು ಸಿದ್ಧಗೊಳಿಸಿ, ಮೊದಲು ಕಾಶಿಗೆ ಹೋಗಲು ಅಪ್ಪಣೆಯನ್ನಿತ್ತರು.

**ಧರ್ಮದಿಗ್ವಿಜಯ:—**

ಗೋವಿಂದನಾಥಯತಿಗಳ ಅಪ್ಪಣೆಯ ಮೇರೆಗೆ, ಶಂಕರಾಚಾರ್ಯರು ಮೊದಲು ಕಾಶಿಗೆ ಹೋದರು. ಅಲ್ಲಿಯೇ ಅವರು ತಮ್ಮ ಮತಪ್ರಸಾರವನ್ನು ಪ್ರಾರಂಭಿಸಿದರು. ಅಲ್ಲಿ ಬೇರೆ ಬೇರೆ ಮತಗಳ ಪಂಡಿತರೊಂದಿಗೆ ವಾದವಿವಾದಗಳನ್ನು ಹೂಡಿ ಅವರನ್ನು ಗೆದ್ದರು. ವೈದಿಕ ಧರ್ಮದಲ್ಲಿಯ ಯಜ್ಞ

೧. ಆಗ ಶಂಕರನು ಎಂಟು ವರ್ಷದ ಬಾಲಕನಿದ್ದನು.

ಯಾಗಾದಿಗಳ ಪುನರುಜ್ಜೀವನವು ಶಂಕರಾಚಾರ್ಯರಿಗೆ ಸರಿದೋರಲಿಲ್ಲ. ಬೌದ್ಧಧರ್ಮದ ಅಹಿಂಸೆ ಮತ್ತು ಸಂನ್ಯಾಸಪ್ರವೃತ್ತಿಗಳನ್ನು ವೈದಿಕಧರ್ಮದಲ್ಲಿ ಸೇರಿಸಿದರು. ಇದರಿಂದ ಅವರ ವೈದಿಕ ಮತಕ್ಕೆ ಒಂದು ಹೊಸ ಸ್ವರೂಪ ಬಂದಿತು. ಯಜ್ಞಯಾಗಾದಿಗಳನ್ನು ಎತ್ತಿಹಿಡಿಯುತ್ತಿದ್ದ ಎಷ್ಟೋ ಬ್ರಾಹ್ಮಣ ಪಂಡಿತರನ್ನೂ ಅವರು ಕಾಶಿಯಲ್ಲಿ ಗೆದ್ದರು. ಅಂಥವರು ಇವರ ಶಿಷ್ಯರಾದರು ( ಚಿತ್ರ ೨ ನೋಡಿರಿ ). ಶಂಕರಾಚಾರ್ಯರು ಸ್ಥಾಪಿಸಿದ ಶೈವ ಮತಕ್ಕೆ ' ಅದ್ವೈತ ' ಮತವೆಂದೂ೧ ಕರೆಯಲಾಗುತ್ತದೆ. ಕಾಶಿಯಲ್ಲಿಯೆ ಅವರು ವೇದಾಂತಸೂತ್ರಗಳು, ಉಪನಿಷತ್ತುಗಳು ಮತ್ತು ಭಗವದ್ಗೀತೆ ಈ ಗ್ರಂಥಗಳಿಗೆ ಸಂಸ್ಕೃತಭಾಷೆಯಲ್ಲಿ ಟೀಕೆಗಳನ್ನು ಬರೆದರು. ಅವು ಈಗಲೂ ಶಾಂಕರಭಾಷ್ಯವೆಂದು ಹೆಸರಾಗಿರುವವು. ಇದಲ್ಲದೆ ಇನ್ನೂ ಅನೇಕ ಧಾರ್ಮಿಕ ಗ್ರಂಥಗಳನ್ನೂ ಸ್ತೋತ್ರಗಳನ್ನೂ ಸಂಸ್ಕೃತದಲ್ಲಿ ರಚಿಸಿರುವರು. ಇವರು ತಮ್ಮ ದಿಗ್ವಿಜಯದಲ್ಲಿ ಒಮ್ಮೆ ಮಂಡನಮಿಶ್ರನೆಂಬ ಒಬ್ಬ ಪ್ರಸಿದ್ಧ ಕರ್ಮಠ ಪಂಡಿತನೊಂದಿಗೆ ವಾದವಿವಾದ ನಡಸಿದರು. ಇದರಲ್ಲಿ ಮಂಡನಮಿಶ್ರನ ಹೆಂಡತಿಯು ಅಧ್ಯಕ್ಷತೆ ವಹಿಸಿದಳು. ಅವಳೂ ಪ್ರಸಿದ್ಧ ವಿದ್ವಾಂಸಳಿದ್ದಳು. ಶಂಕರಾಚಾರ್ಯರು ದೀರ್ಘಕಾಲ ವಾದ ಹೂಡಿ ಇಬ್ಬರನ್ನೂ ಸೋಲಿಸಿದರು. ಮತಪ್ರಚಾರಕ್ಕಾಗಿ ಶಂಕರಾಚಾರ್ಯರು ಮೂರು ಸಾರೆ ಇಡೀ ಭಾರತ ದಲ್ಲಿ ಸಂಚಾರ ಮಾಡಿದರು. ರಾಮೇಶ್ವರದ ಯಾತ್ರೆಯನ್ನು ಮುಗಿಸಿದರು. ತಾಯಿಯ ಮರಣ ಸಮಯದಲ್ಲಿ ಅವಳ ಬಳಿಯಲ್ಲಿದ್ದು ಅಂತ್ಯವಿಧಿಗಳನ್ನು ನೆರವೇರಿಸಿದರು. ತಾವು ಪ್ರಚಾರಮಾಡಿದ ಧರ್ಮದ ಸಂರಕ್ಷಣೆಗಾಗಿ ಭಾರತದ ನಾಲ್ಕು ದಿಕ್ಕುಗಳಲ್ಲಿ ಮುಖ್ಯ ಮಠಗಳನ್ನು ಸ್ಥಾಪಿಸಿದರು. ಅವು ಯಾವ ವೆಂದರೆ—೧. ಉತ್ತರದಲ್ಲಿ ಬದರೀಕೇದಾರ (ಹಿಮಾಲಯದಲ್ಲಿ), ೨. ಪಶ್ಚಿಮ ದಲ್ಲಿ ದ್ವಾರಕೆ (ಕಾಠೆವಾಡದಲ್ಲಿ), ೩. ಪೂರ್ವದಲ್ಲಿ ಜಗನ್ನಾಥಪುರಿ (ಓರಿಸಾ ದಲ್ಲಿ), ೪. ದಕ್ಷಿಣದಲ್ಲಿ ಶೃಂಗೇರಿ ( ಮೈಸೂರು ಪ್ರಾಂತದಲ್ಲಿ). ಶೃಂಗೇರಿಯು ಆದ್ಯಪೀಠವು. ಅಲ್ಲಿಯ ಮಠಕ್ಕೆ ಸುರೇಶ್ವರಾಚಾರ್ಯರು ಮೊದಲನೆಯ

೧. ಜೀವಾತ್ಮಾ ಮತ್ತು ಪರಮಾತ್ಮಾ ಇವುಗಳಲ್ಲಿ ಭೇದವಿಲ್ಲ...(ಪ್ರಾಣಿಗಳಲ್ಲಿಯ ಜೀವವು ಪರಮಾತ್ಮನ ಅಂಶವೇ ಆಗಿರುವದು ಎಂದು ಇದರ ಅಭಿಪ್ರಾಯ. )

ಮಠಾಧಿಪತಿಗಳು. (ಇವರೇ ಶಂಕರಾಚಾರ್ಯರಿಂದ ವಾದದಲ್ಲಿ ಸೋಲಿಸಲ್ಪಟ್ಟ ಮಂಡನಮಿಶ್ರರು).

## ಮರಣ ಮತ್ತು ಯೋಗ್ಯತೆ :—

ಶಂಕರಾಚಾರ್ಯರು ತಮ್ಮ ವಯಸ್ಸಿನ ೩೨ನೆಯ ವರುಷದಲ್ಲಿ ಬದರೀ ಕೇದಾರದಲ್ಲಿ ದೇಹತ್ಯಾಗ ಮಾಡಿದರು. ಅವರು ಜಗದ್ವಿಖ್ಯಾತ ತತ್ತ್ವಜ್ಞಾನಿ ಗಳೆಂದೂ ಎಲ್ಲ ಜಾತಿಯ ಹಿಂದುಗಳಿಗೆ ಜಗದ್ಗುರುಗಳೆಂದೂ ಹೆಸರಾದರು.

### ಅಭ್ಯಸನಗಳು.

೧. ಭಾರತದ ಬಾಹ್ಯರೇಷೆಯ ನಕಾಶದಲ್ಲಿ ಶಂಕರಾಚಾರ್ಯರು ಸ್ಥಾಪಿಸಿದ ಮುಖ್ಯ ಮಠಗಳ ಸ್ಥಳಗಳನ್ನು ಗುರುತಿಸಿರಿ.

೨. ಶಂಕರಾಚಾರ್ಯರು ಪುನರುದ್ಧಾರ ಮಾಡಿದ ವೈದಿಕ ಧರ್ಮವು ಹೇಗೆ ಹೊಸ ಸ್ವರೂಪವನ್ನು ತಾಳಿತು ?

೩. ಶಂಕರಾಚಾರ್ಯರಲ್ಲಿಯ ಅದ್ಭುತ ಪಾಂಡಿತ್ಯದ ಕೆಲವು ಉದಾ ಹರಣೆಗಳನ್ನು ಕೊಡಿರಿ.